

ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದ ಎಂ.ಫಿಲ್., ಪದವಿಯ ಸಂಪ್ರಬಂಧ

# 'ಸರ್ವಜ್ಞನ ವಚನಗಳ ಸಂಪಾದನೆ : ಒಂದು ಅಧ್ಯಯನ'

ಸಂಶೋಧನ ವಿದ್ಯಾರ್ಥಿ :

ಕೆ. ಎಸ್. ಶೀಲಾ

ಮಾರ್ಗದರ್ಶಕರು :

ಡಾ|| ಕೆ. ಆರ್. ಗಣೇಶ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು.



ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

2008



ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ. ಫಿಲ್. ಪದವಿಯ ಸಂಪ್ರಬಂಧ

# "ಸರ್ವಜ್ಞನ ವಚನಗಳ ಸಂಪಾದನೆ – ಒಂದು ಅಧ್ಯಯನ"

ಸಂಶೋಧನ ವಿದ್ಯಾರ್ಥಿ

**ಕೆ.ಎಸ್. ಶೀಲಾ**

ಮಾರ್ಗದರ್ಶಕರು

ಡಾ॥ ಕೆ. ಆರ್. ಗಣೇಶ.

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

ಎಂ. ವಿ. ಸೀ . ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು





ಎಂ. ವಿ. ಸೀ . ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

2008



# **ಮಾರ್ಗದರ್ಶಕರ ಪ್ರಮಾಣ ಪತ್ರ**

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೭-೨೦೦೮ನೇ ಸಾಲಿನ ಎಂ. ಫಿಲ್. ಪದವಿಗಾಗಿ **"ಸರ್ವಜ್ಞನ ವಚನಗಳ ಸಂಪಾದನೆ- ಒಂದು ಅಧ್ಯಯನ"** ಎಂಬ ಸಂಪ್ರಬಂಧವನ್ನು **ಕೆ. ಎಸ್. ಶೀಲಾ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 07/11/2008

ಸ್ಥಳ: ಬೆಂಗಳೂರು.

ಸಹಿ

(ಡಾ॥ ಕೆ. ಆರ್. ಗಣೇಶ)

## ಅಭ್ಯರ್ಥಿಯ ಪ್ರಮಾಣ ಪತ್ರ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೭-೨೦೦೮ನೇ ಸಾಲಿನ ಎಂ. ಫಿಲ್. ಪದವಿಗಾಗಿ **"ಸರ್ವಜ್ಞನ ವಚನಗಳ ಸಂಪಾದನೆ - ಒಂದು ಅಧ್ಯಯನ"** ಎಂಬ ಸಂಪ್ರಬಂಧವನ್ನು **ಡಾ॥ ಕೆ. ಆರ್. ಗಣೇಶ.** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 07/11/2008.

ಸ್ಥಳ: ಬೆಂಗಳೂರು.

ಸಹಿ

ಶೀಲಾ. ಕೆ. ಎಸ್

(ಕೆ. ಎಸ್. ಶೀಲಾ)

# ಪರಿವಿಡಿ





******

# ಅಧ್ಯಾಯ – ಒಂದು

## ಅಧ್ಯಯನದ ಸ್ವರೂಪ ಮತ್ತು ಉದ್ದೇಶ

'ಸರ್ವಜ್ಞ' ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ಕನ್ನಡಿಗರಿಗೆ ಸುಪರಿಚಿತನಾದ ಜನತೆಯ ಕವಿ. ಕನ್ನಡ ಸಾಹಿತ್ಯದಲ್ಲಿ ಸರ್ವಜ್ಞ ತನ್ನ ವೈಶಿಷ್ಟ್ಯವನ್ನು ಮೆರೆದಿದ್ದು, ಇವನ ವಚನಗಳು ಕರ್ನಾಟಕದ ಜನತೆಗೆ ಅತ್ಯಂತ ಚಿರಪರಿಚಿತವಾದವುಗಳಾಗಿವೆ. ಸಮಾಜದ ಅಂಕು– ಡೊಂಕನ್ನು ಕುರಿತು ಈತ ಸಿಡಿದೆದ್ದಿದ್ದಾನೆ. ಆತನು ಪರಿವ್ರಾಜಕನಾಗಿ ದೇಶ ಪರ್ಯಟನೆ ಮಾಡುತ್ತಾ, ಮಾನವರ ಕಷ್ಟಗಳನ್ನು ಕಂಡು ಮರುಗಿಯೋ, ಅನ್ಯಾಯವನ್ನು ಕಂಡು ಕೆರಳಿಯೋ, "ಕುಂತಲ್ಲಿ ನಿಂತಲ್ಲಿ ಪದಗಳ ಹೇಳುವ ಆಶುಕವಿ". ಸಾಮಾಜಿಕ, ನೈತಿಕ ವಿಚಾರಗಳನ್ನು ವಿಶ್ಲೇಷಣಾ ದೃಷ್ಟಿಯಿಂದ ನೋಡಿ, ಸಾಮಾಜಿಕ, ಸಮಾಜದ ವಿವಿಧ ಸ್ತರಗಳನ್ನು ಅಚ್ಚ ಕನ್ನಡದ ಛಂದಸ್ಸಾದ ತ್ರಿಪದಿಯಲ್ಲಿ ನಿರೂಪಿಸಿದ್ದಾನೆ. ಸರ್ವಜ್ಞ ಜಾತೀಯತೆ, ಅಸಮಾನತೆ, ಅನಾಚಾರ, ಅನ್ಯಾಯಗಳನ್ನು ಉಗ್ರವಾಗಿ ಪ್ರತಿಭಟಿಸಿದ್ದಾನೆ.

ಸರ್ವಜ್ಞ ಕವಿಯ ವಚನಗಳ ಸಂಪಾದನಾ ಕಾರ್ಯಕ್ಕೆ ಅಗಣಿತ ಸೇವೆ ಸಲ್ಲಿಸಿರುವ ಮತ್ತು ಶ್ರಮಿಸಿರುವ ಮಹಾನ್‌ವ್ಯಕ್ತಿಗಳ ಕೊಡುಗೆ ಅಪಾರವಾದುದು. ಸರ್ವಜ್ಞನ ತ್ರಿಪದಿಗಳನ್ನು ಆ ವ್ಯಕ್ತಿಗಳು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿದ ಬಗೆಯನ್ನು ಅವಲೋಕಿಸುವ ಒಂದು ಪ್ರಯತ್ನ ಇದು. ಅಂತಹ ಗ್ರಂಥಸಂಪಾದನಾಕಾರರು, ಸರ್ವಜ್ಞನನ್ನು ಹೇಗೆ ಅರ್ಥಮಾಡಿಕೊಂಡಿದ್ದಾರೆ, ವಿಶ್ಲೇಷಿಸಿದ್ದಾರೆ ಎಂಬುದರ ಬಗೆಗೂ ಗಮನಹರಿಸುವ ಕೆಲಸವನ್ನು ಈ ಅಧ್ಯಯನದಲ್ಲಿ ಮಾಡಬೇಕೆಂದಿದೆ. ಸರ್ವಜ್ಞನ ತ್ರಿಪದಿಗಳು ಮೊದಲಿನಿಂದಲೂ ಹೇಗೆ ಸಂಗ್ರಹಗೊಳ್ಳುತ್ತಾ ಬಂದದ್ದನ್ನು ಗುರುತಿಸುವ ಕೆಲಸವನ್ನು ಮಾಡುವ ಪ್ರಯತ್ನವನ್ನು ಇಲ್ಲಿ ನಡೆಸಬೇಕೆಂಬ ಉದ್ದೇಶವಿದೆ.

ವಚನಕಾರರ 'ವಚನ ಕ್ರಮತ್ವ' ಸರ್ವಜ್ಞನ ತ್ರಿಪದಿಗಳ 'ವಚನ ಕ್ರಮತ್ವ' ಇರುವ ವ್ಯತ್ಯಾಸವನ್ನು ಗುರುತಿಸಿ, ವಚನಕಾರರಿಂದ ಸರ್ವಜ್ಞ ಹೇಗೆ ಭಿನ್ನನಾಗುತ್ತಾನೆ ಎಂಬುದರ ಅಧ್ಯಯನ ಮಾಡುವ ಉದ್ದೇಶವೂ ಇದೆ.

ಸರ್ವಜ್ಞನ ಒಂದು ತ್ರಿಪದಿಯ ಪಾಠಗಳು ಅನೇಕ ಪಾಠಾಂತರಗಳನ್ನು ಒಳಗೊಂಡು, ಕೆಲವೊಮ್ಮೆ ಸಂಪೂರ್ಣ ಪದ್ಯಗಳೇ ಪಾಠಾಂತರಗಳಾಗುತ್ತವೆ. ಆಗ ಯಾವ ಪಾಠವನ್ನು ಸ್ವೀಕರಿಸಬೇಕು ಎಂಬ ಗೊಂದಲ ಏಳುತ್ತದೆ. ಗ್ರಂಥಸಂಪಾದನೆಯ ತತ್ವಗಳನ್ನು ಆ ತ್ರಿಪದಿಗಳ ಸಂಪಾದನೆಯ ವಿಷಯದಲ್ಲಿ

ಕಟ್ಟುನಿಟ್ಟಾಗಿ, ಅನ್ವಯಿಸಲು ಸಾಧ್ಯವಾಗುವುದಿಲ್ಲ. ಹಾಗೆ ಸಂಪಾದಿಸಿರುವ ವಿವಿಧ ವಿದ್ವಾಂಸರು (ಬೆಳ್ಳಾವೆ ವೆಂಕಟನಾರಣಪ್ಪ, ಎಸ್.ಜಿ. ನರಸಿಂಹಾಚಾರ್, ಫ.ಗು.ಹಳಕಟ್ಟಿ, ಉತ್ತಂಗಿ ಚನ್ನಪ್ಪ, ಎಲ್.ಬಸವರಾಜು) ಕೆಲವು ಉದಾಹರಣೆಗಳನ್ನು ಪುನರ್ ಪರಿಶೀಲನೆಗೆ ಒಳಗುಮಾಡುವುದು ಕೂಡ ಬಹಳ ಮುಖ್ಯವಾದದ್ದೆನಿಸುತ್ತದೆ.

ಗ್ರಂಥ ಸಂಪಾದನೆಯ ಶಾಸ್ತ್ರದ ದೃಷ್ಟಿಯಿಂದ ಸರ್ವಜ್ಞನ ತ್ರಿಪದಿಗಳನ್ನು ಸಂಪಾದಿಸಿರುವವರಲ್ಲಿ ನಾಲ್ಕು ಜನ ಮಾತ್ರ ಪ್ರಬಲರಾಗಿರುತ್ತಾರೆ. ರೆ॥ ಎಫ್. ಕಿಟಲ್, ತಿರುಳ್ಗನ್ನಡದ ತಿರುಕ ರೆ॥ ಚೆನ್ನಪ್ಪ ಉತ್ತಂಗಿ, ಡಾ॥ ಎಲ್. ಬಸವರಾಜು, ಪ್ರೊ॥ ಎಂ. ವಿ. ಸೀತಾರಾಮಯ್ಯ, ಮೊದಲಾದವರು ನಡೆಸಿದ ಪ್ರಯತ್ನಗಳಿಂದ ಸರ್ವಜ್ಞ ಇಂದಿಗೂ ಉಳಿದುಕೊಂಡು ಬಂದಿದ್ದಾನೆ.

ಕಿಟಲ್ ಸಾಹೇಬರು ಸಂಪಾದನೆಯನ್ನು ಮಾಡದಿದ್ದರೂ ಸರ್ವಜ್ಞನ ತ್ರಿಪದಿಗಳ ಪಾಠವನ್ನು ಅಪಾರವಾಗಿ ಉದಾಹರಣೆಗಳಾಗಿ ನೀಡಿ, ತಾವು ಉಪಯೋಗಿಸಿದ ಪ್ರತಿಯೊಂದು ಪಾಠವನ್ನು ನಮಗೆ ಉಳಿಸಿಕೊಟ್ಟಿದ್ದಾರೆ. ಹಾಗೆಯೇ, ಗ್ರಂಥಸಂಪಾದನಾ ಶಾಸ್ತ್ರವನ್ನು ಬೆಳೆಸಿದ ಡಿ.ಎಲ್. ನರಸಿಂಹಾಚಾರ್, ಡಾ॥ಎಂ. ಎಂ. ಕಲಬುರ್ಗಿ, ಸೀತಾರಾಂ ಜಾಗೀರ್‌ದಾರ್, ಮೊದಲಾದವರು ಅಲ್ಲಲ್ಲಿ ಸರ್ವಜ್ಞನ ತ್ರಿಪದಿಗಳ ಪಾಠಗಳ ಬಗೆಗೆ ಚರ್ಚೆಮಾಡಿದ್ದಾರೆ. ಈ ಅಧ್ಯಯನದಲ್ಲಿ ಅವುಗಳಲ್ಲಿ ಕೆಲವನ್ನು ಗಮನಿಸುವ ಉದ್ದೇಶವಿದೆ.

ಸರ್ವಜ್ಞ 'ತ್ರಿಪದಿ' ಛಂದಸ್ಸನ್ನು ಹೇಗೆ ತನ್ನ ವಿಚಾರವನ್ನು ಹೇಳಿಕೊಳ್ಳಲು ಸಮರ್ಥವಾಗಿ ಬಳಸಿದ್ದಾನೆ. ಅದರಲ್ಲಿ ಆತನಿಗೆ ಎಷ್ಟರಮಟ್ಟಿನ ಸಾಫಲ್ಯ ದೊರೆತಿದೆ ಎಂಬುದನ್ನು ಸಂಕ್ಷಿಪ್ತವಾಗಿ ಅಧ್ಯಯನ ಮಾಡುವ ಉದ್ದೇಶವಿದೆ. ಸರ್ವಜ್ಞನ ತ್ರಿಪದಿಗಳ ಪ್ರಾಚೀನ ಹಸ್ತಪ್ರತಿಗಳ ಬಗೆಗೆ, ಅವುಗಳ ಸ್ವರೂಪಗಳ ಬಗೆಗೆ ವಿದ್ವಾಂಸರು ನಡೆಸಿರುವ ಚರ್ಚೆಯನ್ನು ಒಂದು ಕಡೆ ಸಂಗ್ರಹಿಸುವ ಯೋಚನೆಯೂ ಇದೆ. ಪ್ರಸ್ತುತ ಅಧ್ಯಯನದಲ್ಲಿ ಉಲ್ಲೇಖಿಸಿರುವ ಸರ್ವಜ್ಞನ ವಚನಗಳ ಪಾಠವನ್ನು ಡಾ. ಎಲ್. ಬಸವರಾಜುರವರ 'ಸರ್ವಜ್ಞನ ವಚನಗಳು' ಎಂಬ ಕೃತಿಯಿಂದ ಸಂಗ್ರಹಿಸಲಾಗಿದೆ.

ಸರ್ವಜ್ಞನ ಅಂಕಿತದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಅದನ್ನು ಕುರಿತು ಆಲೋಚನೆ ನಡೆಸಿದೆ. ಕನ್ನಡ ಸಾಹಿತ್ಯದಲ್ಲಿ ಕವಿ ಸರ್ವಜ್ಞನ ವಚನಗಳ ವ್ಯಾಪ್ತಿ ತುಂಬಾ ವಿಸ್ತಾರವನ್ನು ಒಳಗೊಂಡಿರುವುದು ಅದರ ಸಂಪಾದನಾ ಕಾರ್ಯದ ಮೂಲಕ ಎಲ್ಲರಿಗೂ ಗೋಚರವಾಗುತ್ತದೆ.

******

## ಅಧ್ಯಾಯ – ಎರಡು

# ಗ್ರಂಥ ಸಂಪಾದನಾಶಾಸ್ತ್ರದ ಮಹತ್ವ

"ಪ್ರಾಚೀನ ಗ್ರಂಥಗಳ ಪಾಠ ಪರಿಶುದ್ಧತೆಯನ್ನು ರಕ್ಷಿಸಿಕೊಂಡು ಬರಬೇಕೆಂಬ ದೃಷ್ಟಿಯನ್ನು ಒಳಗೊಂಡದ್ದು ಗ್ರಂಥಸಂಪಾದನಾಶಾಸ್ತ್ರದ ಮಹತ್ವವಾಗಿದೆ."[1] ಒಂದು ಕೃತಿಗೆ ಹಲವಾರು ಪ್ರತಿಗಳಿದ್ದು ಮೂಲಪಾಠ ನಿರ್ಣಯಿಸುವುದು ಕಷ್ಟವಾದಾಗ ವಿವಿಧ ಪ್ರತಿಗಳಿಂದ ಪಾಠಾಂತರಗಳನ್ನು ಗುರುತಿಸಿಕೊಂಡು ಮೂಲಕವಿಯ ಪಾಠವನ್ನು ನಿರ್ಣಯಿಸಿ, ಕೃತಿಯ ಪರಿಚಯ ವಿಮರ್ಶೆ, ನಾಮಸೂಚಿ, ಅರ್ಥಸೂಚಿ ಮುಂತಾದ ವಿಷಯಗಳನ್ನೊಳಗೊಂಡ ಕೃತಿಗಳನ್ನು ಪ್ರಕಟಿಸುವುದೇ ಗ್ರಂಥಸಂಪಾದನೆ. ಇದನ್ನು ಇಂಗ್ಲೀಷಿನಲ್ಲಿ "Textual criticism" ಎಂದು ಕರೆಯುತ್ತಾರೆ. ಮ್ಯಾಕ್ಸ್‌ಮುಲ್ಲರ್, ಬ್ಯೂಲರ್, ಪಿ.ಎಲ್.ವೈದ್ಯ, ಎಂ.ಎಸ್.ಕತ್ರೆ, ಇವರುಗಳು ಭಾರತೀಯ ಗ್ರಂಥ ಸಂಪಾದನೆಗೆ ಸ್ಪಷ್ಟರೂಪ ನೀಡಿದವರು.

ಬೆಳ್ಳಾವೆ ವೆಂಕಟನಾರಣಪ್ಪನವರು, ಎಸ್.ಜಿ. ನರಸಿಂಹಾಚಾರ್, ಎಂ.ಎ. ರಾಮಾನುಜಯ್ಯಂಗಾರ್, ಫ. ಗು. ಹಳಕಟ್ಟಿ, ರೆವರೆಂಡ್, ಎಫ್. ಕಿಟಲ್, ರೆ. ಉತ್ತಂಗಿ ಚೆನ್ನಪ್ಪ, ಆರ್. ಎಸ್. ಪಂಚಮುಖಿ, ಆರ್. ಸಿ. ಹಿರೇಮಠ, ಟಿ.ಎಸ್.ವೆಂಕಣ್ಣಯ್ಯ, ತೀ. ನಂ. ಶ್ರೀ, ಡಿ. ಎಲ್. ನರಸಿಂಹಾಚಾರ್, ಎಲ್. ಬಸವರಾಜು, ಎಂ. ಆರ್. ಶ್ರೀನಿವಾಸಮೂರ್ತಿ, ಎ. ಆರ್. ಕೃಷ್ಣಶಾಸ್ತ್ರಿ, ಎನ್. ಬಸವಾರಾಧ್ಯ, ಮೊದಲಾದವರು ಗ್ರಂಥ ಸಂಪಾದನಾಶಾಸ್ತ್ರ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದ್ದಾರೆ. ಪ್ರಾಚೀನ ಹಸ್ತ ಪ್ರತಿಗಳಲ್ಲಿನ ಸಾಹಿತ್ಯವನ್ನು ಸಂಪಾದಿಸಿ, ಪ್ರಕಟಿಸಿದ ಈ ಮಹನೀಯರ ಸೇವೆ ವಿಶಿಷ್ಟವಾದುದು.

ಪರಂಪರಾಗತವಾಗಿ ಬಂದಿರುವ ಲಭ್ಯ ಹಸ್ತಪ್ರತಿಗಳ ಆಧಾರದಿಂದ ಮೂಲಗ್ರಂಥದ ಎಂದರೆ ಕವಿಯ ಸ್ವಹಸ್ತಾಕ್ಷರ ಪ್ರತಿಯ ಸ್ವರೂಪವೇನಿರಬಹುದೆಂಬುದನ್ನು ನಿರ್ಣಯಿಸುವ ಕೆಲಸ ಗ್ರಂಥ ಸಂಪಾದನೆ. ಹಸ್ತಪ್ರತಿಗಳು ಪ್ರತಿಗಳಾಗುವಾಗ ಒದಗುವ ಲೋಪದೋಷ, ಸ್ಖಾಲಿತ್ಯಗಳು ಮೂಲ ಕವಿಯ ಆಶಯ ಗ್ರಹಣಕ್ಕೂ, ಕಾವ್ಯಾಸ್ವಾದನಕ್ಕೂ ಅಡ್ಡಿಯಾಗುವುದರಿಂದ ಈ ಪರಿಷ್ಕರಣ ಅತ್ಯಗತ್ಯವಾಗುತ್ತದೆ. ಕ್ರಿಸ್ತ ಶಕೆಯ ಆದಿಯಿಂದಲೂ ಪ್ರಪಂಚದ ನಾನಾ ದೇಶಗಳಲ್ಲಿ ಈ ಸಂಪಾದನಕಾರ್ಯ ಕ್ರಮಬದ್ಧವಾಗಿ ನಡೆದು, ಗ್ರಂಥ ಸಂಪಾದನೆ ಒಂದು ಉಪಯುಕ್ತ ಶಾಸ್ತ್ರವಾಗಿ ಪರಿಣಮಿಸಿದೆ.

"ಒಂದು ಜ್ಞಾನ ಕ್ಷೇತ್ರದ ಪ್ರಸಿದ್ಧಿಗೆ ಅದರಲ್ಲಿ ದುಡಿಯುವ ಮೇಧಾವಿಗಳು ಹೊಣೆ. ಪದ್ಯ ಸಾಹಿತ್ಯಕ್ಕೆ ಅಗ್ರಪೂಜೆ ಸಲ್ಲುತ್ತಿದ್ದ ಕಾಲದಲ್ಲಿ ಗದ್ಯಕ್ಕೂ ಗದ್ದುಗೆ ಸಿಗುವಂತೆ ಮಾಡಿದ ಬಾಣ, ದಂಡಿ, ಮೊದಲಾದವರು

'ಗದ್ಯಂ ಕವೀನಾಂ ನಿಕಷಂವದಂತಿ' ಎಂಬ ಹಿರಿಮೆಯನ್ನು ಅದಕ್ಕೆ ತಂದುಕೊಟ್ಟರು. ಇದೇ ರೀತಿ ಗ್ರಂಥ ಸಂಪಾದನಾ ಕ್ಷೇತ್ರಕ್ಕೂ ಪ್ರಾಮಾಣಿಕ ದುಡಿಮೆಗಾರರು ಹೆಚ್ಚಿ, ಗ್ರಂಥ ಸಂಪಾದನೆಯ ಮಹತ್ವ ಮತ್ತು ಪ್ರಯೋಜನಗಳನ್ನು ಮೂಡಿಸಬೇಕಾಗಿದೆ. ಗ್ರಂಥ ಸಂಪಾದನೆಯೆನ್ನುವುದು ಕವಿಪಾಠದ ಸತ್ಯ ಸಾಕ್ಷಾತ್ಕಾರಕ್ಕೆ ನಡೆಸಿದ ಒಂದು ಜ್ಞಾನಯಾತ್ರೆಯೆಂಬ, ಹತ್ತು ಹಸ್ತಪ್ರತಿಗಳನ್ನು ಇಟ್ಟುಕೊಂಡು ಹನ್ನೊಂದನೆಯ ಮಿಶ್ರಪ್ರತಿಯನ್ನು ಸಿದ್ಧಪಡಿಸುವುದಾಗಿದೆ ಮೂಲ ಪ್ರತಿಯನ್ನು ರೂಪಿಸಿಕೊಡುವುದಾಗಿದೆಯೆಂಬ ಭಾವನೆಯನ್ನು ಮೂಡಿಸಬೇಕಾಗಿದೆ."[2]

ಉತ್ತಮೋತ್ತಮ ಭಾಗಗಳಿಗೆ ಪಾಠಗಳು ಹುಟ್ಟಿಕೊಂಡಿಲ್ಲ. ಹುಟ್ಟಿಕೊಂಡಿದ್ದ ಪಕ್ಷದಲ್ಲಿ ಸಂಪಾದಕ ನಿರ್ವಹಿಸಬೇಕಾಗುತ್ತಿದ್ದ ಪಾತ್ರವನ್ನು ನೆನೆದಾಗ ಗ್ರಂಥ ಸಂಪಾದನೆಯ ಮಹತ್ವ ವೇದ್ಯವಾಗದಿರದು. ಇದೇ ರೀತಿ ಹಲವು ಕಾವ್ಯಗಳಲ್ಲಿ ಕಂಡುಬರುವ ಪ್ರಕ್ಷಿಪ್ತ ಪದ್ಯಗಳನ್ನು, ಶರಣರ ವಚನ, ದಾಸರ ಹಾಡು, ಸರ್ವಜ್ಞನ ತ್ರಿಪದಿಗಳಲ್ಲಿಯ ಪ್ರಕ್ಷೇಪಗಳನ್ನು ಸೋಸಿ, ತೊಡಕನ್ನು ಬಗೆಹರಿಸಿ, ನೀರಕ್ಷೀರಗಳನ್ನು ಬಿಡಿಸಿ ತೋರಿಸಬೇಕಾಗುತ್ತದೆ ಸಂಪಾದಕ, ಹೀಗೆ ಪಾಠ ನಿರ್ಣಯಿಸಿ ಸಂಪಾದಕ ಬರೆಯಬೇಕಾದುದು ರಸವಿಮರ್ಶೆಯನ್ನೂ ಒಳಗೊಳ್ಳುವ ಉನ್ನತ ವಿಮರ್ಶೆಯನ್ನು. ಅದಕ್ಕಾಗಿ ಗ್ರಂಥಸಂಪಾದನೆಯು ರಸವಿಮರ್ಶೆಯನ್ನೂ ಮೀರಿದ ವಿಸ್ತಾರವುಳ್ಳದೆಂದು ಹೇಳಬೇಕಾಗುತ್ತದೆ.

ಕಾವ್ಯಗಳ ಕರ್ತೃ, ಕವಿಗಳ ಕೃತಿ ಸಂಖ್ಯಾನಿರ್ಣಯ ಮೊದಲಾದ ಕವಿಚರಿತ್ರೆಯ ಮೂಲಭೂತ ಪ್ರಶ್ನೆಗಳನ್ನು ಸಮರ್ಪಕವಾಗಿ ಬಿಡಿಸಲು ಸಂಪಾದನಾಶಾಸ್ತ್ರ ನೆರವು ನೀಡುತ್ತದೆ. ಕಿಲ್ಬಿಷವನ್ನು ತೆಗೆದು ಬದುಕಿನ ಮೌಲ್ಯ, ಜನಾಂಗದ ಸಂಸ್ಕೃತಿಗಳನ್ನು ಸಾಕ್ಷಾತ್ಕಾರಗೊಳಿಸಿಕೊಡುತ್ತದೆ, ಗ್ರಂಥ ಸಂಪಾದನೆ. "ಕವಿ ಪಾಠವನ್ನು ಕಂಡುಹಿಡಿಯುವುದೇ ಗ್ರಂಥ ಸಂಪಾದನೆಯ ಪರಮೋದ್ದೇಶವಲ್ಲ, ಅದು ಸಾಹಿತ್ಯ ಜನಜೀವನಗಳ ನಿಕಟ ಪರಿಚಯವನ್ನು ಮಾಡಿಕೊಡುವುದಕ್ಕೆ ಅದೊಂದು ಸಾಧನೆ"[3] ಎಂಬ ಸುಪ್ರಸಿದ್ಧ ಸಂಪಾದಕ ಜಾನ್ ನಿಕೊಲೊ ಮಾಡ್ವಿಗ್‌ನ ಅಭಿಪ್ರಾಯ ಇದನ್ನು ಸಮರ್ಥಿಸುತ್ತದೆ.

"ವಚನ ಸಾರಗಳೆಂಬ ವಚನ ಸಂಗ್ರಹ ಗ್ರಂಥಗಳೂ ಕಲ್ಯಾಣ ಕ್ರಾಂತಿಗೆ 200 ವರ್ಷಗಳ – ತರುವಾಯ ವಿಶೇಷವಾಗಿ ಬೆಳೆದವು. ಈ ಅವಧಿಯಲ್ಲಿ ವಚನಗಳಿಗೆ ಭಿನ್ನಪಾಠ, ನಷ್ಟಸ್ಥಿತಿ ಉಂಟಾಗಿರುವುದು ಸಹಜ. ಇಂಥ ಪರಿಸ್ಥಿತಿಯಲ್ಲಿ ನೂರು ಕಡೆಗಳಿಂದ ವಚನ ಕಟ್ಟುಗಳನ್ನು ಸಂಗ್ರಹಿಸುವುದು, ಆ ಕಟ್ಟುಗಳಿಂದ ಉಚಿತ ವಚನಗಳನ್ನು ಆಯ್ದುಕೊಳ್ಳುವುದು, ಬಹುಶಃ ಆಯ್ದುಕೊಂಡ

ವಚನಗಳ ಪಾಠಶುದ್ಧಿಯನ್ನು ಪರೀಕ್ಷಿಸುವುದು ಮತ್ತು ಒಂದು ತತ್ವದ ತಳಗಟ್ಟಿನಲ್ಲಿ ಹೊಂದಿಸುವುದು ಈ ಎಲ್ಲಾ ಕಾರ್ಯಗಳು ಆಧುನಿಕ ಗ್ರಂಥ ಸಂಪಾದಕನ ಶ್ರಮ, ಧೋರಣೆಗಳನ್ನು ಕೆಲಮಟ್ಟಿಗೆ ಹೋಲುತ್ತವೆ."*

"Textual criticism" ಅರ್ಥದ ಗ್ರಂಥ ಸಂಪಾದನೆಯು ಪತ್ರಿಕಾ ಸಂಪಾದನೆ, ಕವನ ಲೇಖನ ಸಂಪಾದನೆಗಳನ್ನು ಹೊರತುಪಡಿಸಿ ಪ್ರಾಚೀನ ಕೃತಿ ಸಂಪಾದನೆ, ಶಾಸನ ಸಂಪಾದನೆ, ಜಾನಪದ ಸಾಹಿತ್ಯ ಸಂಪಾದನೆಗಳಿಗೆ ಮಾತ್ರ ಅನ್ವಯಿಸುತ್ತದೆ. ಪ್ರಾಚೀನ ಕೃತಿ ಸಂಪಾದನೆಯೆಂದರೆ "ಒಂದು ಹಸ್ತ ಪ್ರತಿಯನ್ನು ಅಚ್ಚು ಮಾಡುವುದು" ಎಂಬ ಬೆಂಗಳೂರು ಮತ್ತು ಬಳ್ಳಾರಿಯ ಕೃಷ್ಣಯ್ಯಶೆಟ್ಟಿ ಮೊದಲಾದ ಮುದ್ರಕರ ಕಾಲದ ಅಭಿಪ್ರಾಯ ಇಂದು ಬಿದ್ದುಹೋಗಿ, ಒಂದು ಕೃತಿಯಲ್ಲಿ ಸೇರಿಕೊಂಡ ಸತ್ಯ ಮತ್ತು ಅಸತ್ಯ ಪಾಠಗಳನ್ನು ವ್ಯವಸ್ಥಿತ ವಿಧಾನಗಳ ಮೂಲಕ ಬಿಡಿಸಿ ನೋಡುವ ವೈಜ್ಞಾನಿಕ ಕಾರ್ಯವೆಂಬ ಭಾವನೆ ಮೂಡಿದೆ.

"ಗ್ರಂಥ ಸಂಪಾದನೆಗೆ ಮೂಲ ಸಾಮಗ್ರಿಯೆಂದರೆ ಹಸ್ತಪ್ರತಿಗಳು. ಹಸ್ತಪ್ರತಿ ಸಂಗ್ರಹದಷ್ಟೇ ಮುಖ್ಯವಾದದ್ದು, ಸೂಚಿಗಳನ್ನು ಸಿದ್ಧಪಡಿಸುವುದು. ಗ್ರಂಥ ಸಂಪಾದನೆ ಬೆಳೆದುಬರುತ್ತಿದ್ದಂತೆ ಈ ಕ್ಷೇತ್ರವನ್ನು ಕುರಿತು ಎರಡೇ ಎರಡು ಶಾಸ್ತ್ರ ಗ್ರಂಥಗಳು ಹುಟ್ಟಿಬಂದಿವೆ. ಇದು ಈ ಕ್ಷೇತ್ರದ ಶಾಸ್ತ್ರ ಸಾಹಿತ್ಯದ ಬಡತನವನ್ನು ತೋರಿಸುತ್ತದೆ."[4] ಸರ್ವಜ್ಞನಿಗೆ ಸಂಬಂಧಿಸಿದಂತೆ ಅಂತಹದೊಂದು ಪ್ರಯತ್ನ, ನಡೆದೇ ಇಲ್ಲ ಎಂಬುದು ಒಂದು ದೊಡ್ಡ ಕೊರತೆ. ಅದಕ್ಕೆ ಕಾರಣಗಳನ್ನು ಹುಡುಕಬೇಕಾಗಿದೆ. ಗ್ರಂಥಸಂಪಾದನೆಯ ಕಡೆಯ ಹಂತವೆಂದರೆ, ಗ್ರಂಥಕರ್ತನು ಬಳಸಿಕೊಂಡಿರುವ ಆಕರಗಳನ್ನು ಪ್ರತ್ಯೇಕಿಸುವುದು.

ಇದೆಲ್ಲವನ್ನು ಗಮನಿಸಿದರೆ, ಗ್ರಂಥ ಸಂಪಾದಕನ ಮಹತ್ವ, ಅದರಲ್ಲಿಯೂ ಪಾಠರಕ್ಷಣಾ ಪ್ರಜ್ಞೆ ಮತ್ತು ಇತಿಹಾಸ ಪ್ರಜ್ಞೆಗಳ ಅಭಾವದಿಂದ ಕೂಡಿದ ಭಾರತದಲ್ಲಿ ಮಿಕ್ಕ ದೇಶಗಳಿಗಿಂತ ಮಿಗಿಲೆಂದು ಮನವರಿಕೆಯಾಗದಿರದು; ಗ್ರಂಥ ಸಂಪಾದನೆಯು ಅದೃಶ್ಯ ರೂಪದ ಪಾಠದೇವತೆಯನ್ನು ಸಾಕ್ಷಾತ್ಕರಿಸಿಕೊಳ್ಳಲು ಮಾಡುವ ಒಂದು ತಪಸ್ಸು, ಕುಡಿಯನ್ನು ಕೊಡವಿ ಪಾಠ ಜ್ಯೋತಿಯನ್ನು ಬೆಳಗಿಸುವ ಒಂದು ಸಾರ್ಥಕ ಕಾರ್ಯವೆನಿಸದಿರದು.

---

*. ದಿ. ಚೆನ್ನಪ್ಪ ಉತ್ತಂಗಿಯವರು ಮುಕ್ತಕವಾಗಿದ್ದ ಸರ್ವಜ್ಞನ ವಚನಗಳನ್ನು ಸಂಪಾದಿಸಿದಂತೆ, ಇವರು ಶರಣರ ವಚನಗಳನ್ನು ಸಂಪಾದಿಸಿರುವರೆಂದು ಊಹಿಸಿಕೊಳ್ಳಬಹುದೆಂದು ಎಂ.ಎಂ. ಕಲಬುರ್ಗಿಯವರು ಕನ್ನಡ ಗ್ರಂಥ ಸಂಪಾದನ ಶಾಸ್ತ್ರದಲ್ಲಿ ಹೇಳಿದ್ದಾರೆ.

******

## ಅಡಿಟಿಪ್ಪಣಿಗಳು

1) ಡಿ. ಎಲ್. ನರಸಿಂಹಾಚಾರ್ : ಕನ್ನಡ ಗ್ರಂಥಸಂಪಾದನೆ, ಪುಟ - 4

2) ಡಾ॥ ಎಂ. ಎಂ. ಕಲಬುರ್ಗಿ: ಕನ್ನಡ ಗ್ರಂಥಸಂಪಾದನಾಶಾಸ್ತ್ರ, ಪುಟ - 198

3) ಡಾ॥ ಎಂ. ಎಂ. ಕಲಬುರ್ಗಿ: ಕನ್ನಡ ಗ್ರಂಥಸಂಪಾದನಾಶಾಸ್ತ್ರ, ಪುಟ - 203

4) ಡಾ॥ ಎಂ. ಎಂ. ಕಲಬುರ್ಗಿ: ಮಾರ್ಗ- 2, ಪುಟ - 590

# ಅಧ್ಯಾಯ – ಮೂರು

## ಕವಿ ಸರ್ವಜ್ಞ

"ಸರ್ವಜ್ಞ" ಎಂದು ಜನಜನಿತವಾಗಿರುವ ಈ ವ್ಯಕ್ತಿ ಒಬ್ಬ ಕವಿ. ಕಂಡದ್ದನ್ನು ಕಂಡೊಡನೆಯೆ ಪದ್ಯರೂಪದಲ್ಲಿ ಕಟ್ಟಿ ನಿಲ್ಲಿಸುವ ಕೌಶಲವಿರುವ ಕಾರಣ ಈತ ಒಬ್ಬ ಕವಿ ಎನ್ನಬಹುದು. ಈ ಕವಿಯ ಕಾವ್ಯ ವಚನರೂಪದ್ದು. ವಚನ ಎಂದರೆ ಕೂತು ಬರೆದದ್ದು ಎನ್ನುವುದಕ್ಕಿಂತ ಸುಮ್ಮನೆ ಹೇಳದ್ದು, ಮಾತನಾಡಿದ್ದೆಂದು ಅರ್ಥವಾಗುತ್ತದೆ. ಸರ್ವಜ್ಞನ ತ್ರಿಪದಿಗಳಿಗೆ "ಸರ್ವಜ್ಞನ ವಚನ" ಎಂದು ಹೆಸರಿರುವುದು, ಈ ಕಾರಣದಿಂದಲೇ ಇರಬೇಕು."[1]

ಕರ್ನಾಟಕದ ಪಂಡಿತರಿಂದಲೂ, ಪಾಮರರಿಂದಲೂ ಕನ್ನಡದ ದಾರ್ಶನಿಕ ಕವಿಯೆಂದು ಹೊಗಳಿಕೆಗೆ ಪಾತ್ರನಾದ ಈ ಸರ್ವಜ್ಞ ಕವಿಯ ಮೊದಲ ಹೆಸರು ಬಹುಶಃ 'ಪುಷ್ಪದತ್ತ'. ಈ ಕವಿಯು ಕ್ರಿಸ್ತಶಕ ಹದಿನಾರನೇ ಶತಮಾನದಲ್ಲಿ ಜೀವಿಸಿರಬಹುದೆಂದು ಪಂಡಿತರ, ಸಂಶೋಧಕರ ತರ್ಕವಿದೆ. "ಸರ್ವಜ್ಞ ಕವಿಯು ತ್ರಿಪದಿಗಳಲ್ಲಿ ವಚನಗಳನ್ನು ರಚಿಸಿದ್ದ. ಏಳು ಸಾವಿರದ ಎಪ್ಪತ್ತು ವಚನಗಳನ್ನು ಹೇಳಿದನು ಕೇಳೋ ಸರ್ವಜ್ಞ ಎಂದಿದ್ದಾರೆ."[2] ಸರ್ವಜ್ಞನ ಪದ್ಯಗಳು ತ್ರಿಪದಿಗಳಾದರೂ ಅವುಗಳನ್ನು ವಚನಗಳೆಂದು ಕರೆಯುವುದು ವಾಡಿಕೆ.

ಸರ್ವಜ್ಞನೆಂಬುವನು ಗರ್ವದಿಂದಾದವನೆ
ಸರ್ವರೊಳಗೊಂದು ನುಡಿಗಲಿತು ವಿದ್ಯದ
ಪರ್ವತವೆ ಆದ ಸರ್ವಜ್ಞ

"ಸರ್ವಜ್ಞ ಕವಿಯು ಮಹಾವಿದ್ವಾಂಸನಾಗಿದ್ದರೂ, ತನ್ನ ಪಾಂಡಿತ್ಯದಲ್ಲಿ ಎಳ್ಳ ಗರ್ವಿಯಾಗಿದ್ದಿಲ್ಲ. ತಾನು ನುಡಿದ ವಚನಗಳೂ ಬರೆದ ವಚನಗಳೆಲ್ಲವೂ "ಬಾಳಲೋಚನನ ಶರಣರ ಆಳಾಗಿ ಬರೆದೆನು ನೋಡಾ" ಎಂದು ಹೇಳಿ ತನ್ನ ಘನತೆಯನ್ನು ಹೆಚ್ಚಿಸಿಕೊಂಡಿದ್ದಾನೆ. ತಾನು ಎಲ್ಲ ಬಲ್ಲವನೆಂದು ಒಂದು ಕಡೆಗೆ ಹೇಳಿಕೊಂಡರೂ ಮತ್ತೊಂದು ಕಡೆಗೆ "ಎಲ್ಲ ಬಲ್ಲವರಿಲ್ಲ। ಬಲ್ಲವರು ಬಹಳಿಲ್ಲ। ಬಲ್ಲವರೂ ಇದ್ದೂ ಬಲವಿಲ್ಲ ಸಾಹಿತ್ಯವೆಲ್ಲವರಿಗಿಲ್ಲ ಸರ್ವಜ್ಞ" ಎಂದು ಹೇಳಿಕೊಂಡಿದ್ದಾನೆ.

ಸರ್ವಜ್ಞ ಕವಿಯು ವಿನೋದಪ್ರಿಯನಾಗಿದ್ದುದರಿಂದಲೇ ಅವನ ವಚನಗಳಲ್ಲಿ ಹಾಸ್ಯ ಒಡೆದು ಕಾಣುತ್ತದೆ. ಸರ್ವಜ್ಞ ಕವಿಯು ಋಷಿಯ ವಂಶದವನು, ಶಿವನ ಗಣಗಳಲ್ಲಿಯ ಒಬ್ಬ ಮೇಧಾವಿ. ಋಷಿಯ ಅಂಶವಿಲ್ಲದವನು ಕವಿಯಾಗಲಾರ. ಕವಿತಾಶಕ್ತಿಯು ಸಂಸ್ಕಾರ ಜನ್ಯವಾದುದರಿಂದ ಕೇವಲ ಪ್ರಯತ್ನದಿಂದ ಆಶು ಕವಿಯಾಗಲಾರ. ಪ್ರಯತ್ನದಿಂದ ಪಂಡಿತನಾಗಬಹುದು. ಆದರೆ ಸರ್ವಜ್ಞ ಕವಿಯು ಪ್ರಯತ್ನದಿಂದಾದ ಕವಿಯಲ್ಲ. ಋಷಿಯ ಅಂಶದವನು. ಆದ್ದರಿಂದಲೇ ಯಾವುದೊಂದು ವಿಷಯ ನೆನಪಾದಾಗ, ದೃಶ್ಯ ಕಂಡಾಗ ಆ ವಿಷಯದ ಮೇಲೆ ಅಲ್ಲಿಯೇ ಕವನಕಟ್ಟಿ ಹಾಡಿಯೇ ಬಿಡುವ ದಾರ್ಶನಿಕ ಕವಿ ಈ ಸರ್ವಜ್ಞ, ಸರ್ವಜ್ಞ ಕವಿಯು ಒಂದೇ ಕಡೆಯಲ್ಲಿ ವಾಸಿಸಿ ವಚನಗಳನ್ನು ಬರೆಯಲಿಲ್ಲ. ಎಲ್ಲವುಗಳೂ ದೇಶಾಟನ ಕಾಲದಲ್ಲಿ ಪ್ರಸಂಗ ಬಂದಾಗ ಬಾಯಿಯಿಂದ ಹೊರ ಹೊಮ್ಮಿದವು. ಸರ್ವಜ್ಞ ಕವಿಯ ವಚನಗಳ ಉದಾಹರಣೆ ಕೊಟ್ಟು ಉಪಯೋಗಿಸಿದ ಸಾಹಿತ್ಯಕ್ಕೆ ಕನ್ನಡದಲ್ಲಿ ತುಂಬಾ ಬೆಲೆ. ಸರ್ವಜ್ಞ ಪಂಡಿತರಿಗೂ ಪಾಮರರಿಗೂ ಸಹ ಯೋಗ್ಯವಾದ ಅಮೋಘ ತ್ರಿಪದಿಗಳನ್ನು ನೀಡಿ 'ಕನ್ನಡ ನಾಡ ಕವಿ' ಎಂದು ಅಮರನಾಗಿದ್ದಾನೆ.

ಸರ್ವಜ್ಞನು ಜನತೆಯ ಕವಿಯಾಗಿ, ದೇಸಿ ಕಾವ್ಯ ಪದ್ಧತಿಗೆ ಗೌರವವನ್ನು ತಂದುಕೊಟ್ಟನು. ರಂ.ಶ್ರೀ. ಮುಗಳಿ ಅವರು ಮಾರ್ಮಿಕವಾಗಿ ಹೇಳಿದಂತೆ ಕನ್ನಡ ಸಾಹಿತ್ಯದ ದೇಸಿತತ್ವವು ಸರ್ವಜ್ಞನಲ್ಲಿ ಸಾರ್ಥಕ್ಯವನ್ನು ಪಡೆದಿದೆ. ಸರ್ವಜ್ಞ ವಚನಕಾರರ ಉತ್ತರಾಧಿಕಾರಿ, ಏಕೆಂದರೆ ವಚನಕಾರರಿಂದ ಪ್ರಾರಂಭವಾದ ವಚನ ಸಾಹಿತ್ಯ ಸರ್ವಜ್ಞನವರೆವಿಗೂ ಮುಂದುವರೆದಿದೆ. ರಂ.ಶ್ರೀ.ಮುಗಳಿಯವರು "ಸರ್ವಜ್ಞನ ವಚನಗಳಲ್ಲಿ ಕಥೆಯಿಲ್ಲ, ವರ್ಣನೆಯಿಲ್ಲ, ಆದರೆ ಸಮಗ್ರ ಜೀವನ ಕಥೆ ಕಂಡುಬರುತ್ತದೆ. ಇವು ಬರೀ ನೀತಿ ಬೋಧಕಗಳಲ್ಲ, ಬದಲಾಗಿ ವಿವೇಕವಾಣಿ ಇದೆ ಎನ್ನುತ್ತಾರೆ."[3] ಅವನ ಅನೇಕ ವಚನಗಳಲ್ಲಿ ಸಮಾಜದ ಗುಣದೋಷಗಳ ಚಿತ್ರಣವಿದೆ.

ಸರ್ವಜ್ಞ ಕವಿಯನ್ನು ವರಕವಿ, ಜಂಗಮ ವಿಶ್ವಕೋಶ ಎಂದು ಕರೆಯಲಾಗಿದೆ, ಇವನದು ಪೂರ್ವಗ್ರಹರಹಿತದೃಷ್ಟಿ. ಇಂಥದೊಂದು ಜಾತಿ ವೃತ್ತಿಯೂ ಶ್ರೇಷ್ಠವೆಂದಾಗಲಿ, ಇನ್ನೊಂದು ಕೀಳು ಎಂದಾಗಲಿ ಭಾವಿಸುವ ಸಂಕುಚಿತ ಪ್ರವೃತ್ತಿ ಅವನದಲ್ಲ. 16–17 ನೇ ಶತಮಾನದ ವಚನಕಾರ. ಸರ್ವಜ್ಞ ಮೂರ್ತಿಯ ಜೀವನ ಚರಿತ್ರೆಯ ಬಗ್ಗೆ ಖಚಿತವಾದ ಯಾವುದೇ ಸಂಗತಿಗಳು ತಿಳಿದುಬಂದಿಲ್ಲ.

"ಆಡು ಮುಟ್ಟದ ಸೊಪ್ಪಿಲ್ಲ" ಎಂದು ಹೇಳುವುದುಂಟು. ಅದರಂತೆ ಸರ್ವಜ್ಞ ಹೇಳದ ವಿಷಯವಿಲ್ಲ. ದಿನನಿತ್ಯವೂ ಪ್ರಪಂಚದಲ್ಲಿ ಎಲ್ಲೆಡೆಗೆ ಕಾಣಿಸುವ ವಿಷಯಗಳನ್ನು ಕುರಿತು ಸರ್ವಜ್ಞ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾನೆ. ಒಟ್ಟಿನಲ್ಲಿ ಅನುಭವಶಾಲಿ, ಸತ್ಯಪ್ರೇಮಿ, ಖಂಡಿತವಾದಿ, ವಿಶಾಲ ಮನಸ್ಕ, ವಿರಕ್ತ, 'ವಿವೇಕಿ ಎಂಬ ಮೂರ್ತಿ ಚಿತ್ರವು ನಮ್ಮ ಕಣ್ಣು ಮುಂದೆ ಅವನ ತ್ರಿಪದಿಗಳನ್ನು ಓದುತ್ತ ಹೋದಹಾಗೆ ಸುಳಿಯುತ್ತದೆ, ಎಂದು ಮುಗಳಿಯವರು ಸರ್ವಜ್ಞ ಕವಿಯ ವ್ಯಕ್ತಿತ್ವದ ಬಗೆಗೆ ನುಡಿದಿದ್ದಾರೆ.

ಸಾಹಿತ್ಯ ಪರಂಪರೆಯ ದೃಷ್ಟಿಯಿಂದಲೂ ಸರ್ವಜ್ಞ ಏಕಾಂಗಿಯಾಗಿಯೇ ತೋರುತ್ತಾನೆ. ಯಾಕೆಂದರೆ ಅವನು ತನ್ನನ್ನು ತನಗಿಂತ ಹಿಂದಿನ ಕನ್ನಡ ಸಾಹಿತ್ಯದೊಂದಿಗೆ ಬೆಸೆದು ಕೊಳ್ಳುವುದೇ ಇಲ್ಲ– ವಚನಕಾರರ ಮನೋಧರ್ಮದೊಂದಿಗೆ ಹೊರತು, ತನಗಿಂತ ಹಿಂದೆ ಒಂದು ಸಾಹಿತ್ಯಕ ಪರಂಪರೆಯಿದೆ, ತಾನು ಅದರ ಒಂದು ಭಾಗ, ತಾನು ಬರೆಯುತ್ತಿರುವುದು ಸಾಹಿತ್ಯವೇ– ಎಂಬ ಯಾವ ಅರಿವಿನಿಂದಲೂ ಈತ ಬದ್ಧನಾದವನಲ್ಲ. ಹೀಗಾಗಿ ಸರ್ವಜ್ಞನವೆಂದು ಹೇಳಲಾದ ಈ ತ್ರಿಪದಿಗಳು, ಕಾವ್ಯ ಎನ್ನಲು ಏನೇನಿರಬೇಕು ಎಂದುಕೂಂಡಿದ್ದೇವೆಯೋ ಅದೆಲ್ಲವನ್ನೂ ಗಾಳಿಗೆ ತೂರುತ್ತವೆ. ಹೀಗಾಗಿ ಸರ್ವಜ್ಞನ ಕಾವ್ಯಕ್ಕೆ ಇಂಥದೇ ವಸ್ತು ಇಲ್ಲ.

"ನಕ್ಕು ನಗಿಸುವ ನುಡಿ ಲೇಸು" ಎನ್ನುವ ಸರ್ವಜ್ಞನು ನಗುನಗುತ್ತಲೇ ಚುಚ್ಚು ಮದ್ದನ್ನು ನಾಟಿಸುವ ಸಮಾಜವೈದ್ಯ. ವೇಮನ, ತಿರುವಳ್ಳುವರ್ ಅವರಂತೆ ಸರ್ವಜ್ಞನಿಗೂ ನೀತಿ ಸಾಹಿತ್ಯದಲ್ಲಿ ಉಚ್ಚಸ್ಥಾನವು ಸಲ್ಲುತ್ತದೆ ಎಂದಿದ್ದಾರೆ ಎ.ಆರ್.ಕೃಷ್ಣಶಾಸ್ತ್ರಿಗಳು."[4] "ತ್ರಿಪದಿ ಸಾಮ್ರಾಜ್ಯದ ಸಾರ್ವಭೌಮ"ಎಂದು ಸರ್ವಜ್ಞ ನನ್ನು ಕರೆಯಲಾಗಿದೆ. ತ್ರಿಪದಿ ರೂಪವು ಸರ್ವಜ್ಞನ ಆಶಯ– ಅಭಿವ್ಯಕ್ತಿಗಳಲ್ಲಿ ತನ್ನ ಸಾರ್ಥಕತೆಯನ್ನು ಪಡೆಯಿತೆಂದರೆ ಅತಿಶಯೋಕ್ತಿಯಲ್ಲ. ಎಲ್ಲದರ ತಿರುಳನ್ನು ಬಲ್ಲವನು, "ತ್ರಿಪದಿ ಸಾಹಿತ್ಯಕ್ಕೆ ಸರ್ವಜ್ಞನೇ ಚರಮವಿರಮ ಸ್ಥಾನವೆಂಬಂತೆ" ಕಂಡುಬಂದಿದ್ದಾನೆ.

'ತಿರುಮಲ ತಾತಾಚಾರ್ಯಶರ್ಮ' ಅವರು, ಸರ್ವಜ್ಞನು ಕ್ರಾಂತಿ ಪುರುಷ, ಸಂಕ್ರಾಂತಿ ಪುರುಷ, ಆತನು ಜ್ಞಾನದಾನಿ, ಪ್ರವಾಚಕ,ಸುಧಾರಕ; ಎಲ್ಲ ಧ್ವಂಸ ಮಾಡಿ ಹೊಸದಾಗಿ ಸುಂದರ ಜಗತ್ತನ್ನು ಸೃಷ್ಟಿಸಲು ಬಂದ ರುದ್ರಶಕ್ತಿ!. ನೆರಳಿಗಾಗಿ ತಿರುಳಿಗೆ ತಿಲೋದಕವನ್ನು ಬಿಟ್ಟು ಆತ್ಮ ವಿನಾಶ ಮಾಡಿಕೊಳ್ಳುವವರ ಗೋತ್ರಕ್ಕೆ ಸೇರಿದವನಲ್ಲ ಅವನಿಟ್ಟ ಒಂದು ಮಾತು, ಅವನು ಹರಿಯಿಸಿದ ಕಣ್ಣೀರು, ಅವನ ಕಣ್ಣಿನಿಂದ ಸಿಡಿದ ಒಂದು ಕಣ–ಎಲ್ಲವೂ ಜನ್ಮಭೂಮಿಗಾಗಿ, ಮಾನವಲೋಕದ ಉದ್ಧಾರಕ್ಕಾಗಿ."5

" ಸರ್ವಜ್ಞನದು ಮನಸ್ಸನ್ನು ರಂಜಿಸುವ ಅಥವಾ ಅರ್ಥರಮ್ಯತೆಯನ್ನು ವ್ಯವಹರಿಸುವ ಉಕ್ತಿ ವಿಧಾನವಲ್ಲ. ಮನಸ್ಸನ್ನು ಕೆದಕುವ, ಹೊಡೆದೆಬ್ಬಿಸುವ, ಉಕ್ತಿ ವಿಧಾನ, ಪ್ರಶ್ನಿಸುವ ವಿಧಾನ –

ದಂಡಿಸದೆ ದೇಹವನು, ಖಂಡಿಸದೆ ಕರಣವನು

ಉಂಡುಂಡು ಸ್ವರ್ಗವೇರಲಿಕೆ, ಅದನೇನು

ರಂಡೆಯಾಳುವಳೆ ಸರ್ವಜ್ಞ

ಎಂಬಂಥ ಉಕ್ತಿಗಳನ್ನು ಗಮನಿಸಬಹುದು".[6]

ವಿವಿಧ ಜನ ಸಂಪರ್ಕದಿಂದ ಈ ವೀರ ವಿರಕ್ತನ ಹೃದಯ ವಿಶಾಲವಾಯಿತು.ಯಾವುದನ್ನೂ ಹೃದಯಕ್ಕೆ ಮುಟ್ಟುವಂತೆ ಹೇಳುವ ರಸಿಕತೆ ಅವನಲ್ಲಿ ಉದಯಿಸಿತು. ಬಾಳಿನಲ್ಲಿ ಕಹಿಯನ್ನು ಉಂಡರೂ ಸರ್ವಜ್ಞ ಬಾಳನ್ನು ತಿರಸ್ಕರಿಸದೆ ಸಮರ್ಥ ಕವಿಯಾಗಿ ನಿಲ್ಲುವ ಸ್ಥಾನವನ್ನು ಪಡೆದಿರುವವನಾಗಿದ್ದಾನೆ.

## 1. "ಸರ್ವಜ್ಞನ ಜೀವನ – ದೇಶ – ಕಾಲ – ಮತದ ವಿಚಾರ"

### 1) ಸರ್ವಜ್ಞನ ಜೀವನ – ದೇಶ ವಿಚಾರ :

ಸರ್ವಜ್ಞ ಕವಿಯು ತನ್ನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಹೇಳಿಕೊಂಡಿದ್ದಾನೆ. ಜನತೆಯು ಸರ್ವಜ್ಞನನ್ನು ಮಹಾತ್ಮರ ಸಾಲಿಗೆ ಸೇರಿಸಿ ಬಿಟ್ಟ ಪರಿಣಾಮವಾಗಿ ಅವನು ಕೈಲಾಸದಲ್ಲಿ ಶಿವನ ಹತ್ತಿರ ಇದ್ದ ಪುಷ್ಪದತ್ತನೆಂಬ ಗಣನಾಥನ ಅವತಾರನೆಂಬ ಭಾವನೆಯು ಬೆಳೆದು ಬಂದಿದೆ. ಸರ್ವಜ್ಞನ ಜನನದ ಬಗೆಗೆ ಎರಡು ಐತಿಹ್ಯಗಳಿವೆ.

ಮೊದಲನೆ ಐತಿಹ್ಯ – ಧಾರವಾಡ ಜಿಲ್ಲೆಯ 'ಮಾಸೂರು' ಗ್ರಾಮವಾಸಿ ಬಸವರಸನೆಂಬ ಹೆಸರಿನ ಆರಾಧ್ಯ ಬ್ರಾಹ್ಮಣನೇ ಈ ಸರ್ವಜ್ಞ ಮೂರ್ತಿಯ ತಂದೆ. ಬಸವರಸನ ಹೆಂಡತಿಯ ಹೆಸರು ಮಲ್ಲಕ್ಕ. ಈಕೆಗೆ ಬಹಳ ದಿನಗಳಾದರೂ ಮಕ್ಕಳಾಗಲಿಲ್ಲ. ಬಸವರಸನ ಪತ್ನಿ ಮಲ್ಲಮ್ಮನು ಮಕ್ಕಳಿಲ್ಲದೇ ದುಃಖಿಸುತ್ತಿರುವುದನ್ನು ಕಂಡು ಪುತ್ರ ಸಂತಾನದ ವರ ಪಡೆದುಕೊಂಡು ಬರಲು ಕಾಶಿ ಯಾತ್ರೆಗೆ ಹೊರಟನು. ಕಾಶಿಗೆ ಹೋಗಿ ವಿಶ್ವನಾಥನ ಪ್ರಸಾದಪಡೆದು ಮರಳುವಾಗ ದಾರಿಯಲ್ಲಿ ಸಿಕ್ಕಿದ ಅಂಬಲೂರು ಎಂಬ ಗ್ರಾಮದ ಕುಂಬಾರ ಸಾಲೆಯಲ್ಲಿ ಉಳಿದನು. ಕುಂಬಾರ ಮಾಳಿ ಮತ್ತು ಬಸವರಸರ ಆಕಸ್ಮಿಕವಾದ ಮೋಹದ ಮಗುವಾಗಿ ಸರ್ವಜ್ಞ ಜನಿಸಿದನು.

ಸರ್ವಜ್ಞ ಮೂರ್ತಿಗೆ ಬಾಲ್ಯದಲ್ಲಿಯೆ ಅಗಾಧಜ್ಞಾನವಿತ್ತು. ಅವನಿಗೆ ಹಿಂದಿನ ಜನ್ಮದ ಅರಿವು ಇತ್ತೆಂದು ಅವನ ವಚನಗಳಲ್ಲಿ ವ್ಯಕ್ತವಾಗಿದೆ.

ಅಂಬಲೂರೊಳಗೆಸೆವ ಕುಂಬಾರ ಸಾಲೆಯಲಿ

ಇಂಬಿನಾಕಳೆಯ ಮಾಳಿಯೊಳು ಬಸವರಸ

ನಿಂಬಿಟ್ಟನೆನ್ನ ಸರ್ವಜ್ಞ

**<u>ಎರಡನೆಯ ಐತಿಹ್ಯ:</u>** "ಸರ್ವಜ್ಞನು ಪುರಾತನ ಶಿವಶರಣ ಕುಂಬಾರ ಗುಂಡಯ್ಯನ ಕುಲದವನಾಗಿದ್ದಿರಬಹುದು ಎಂದು ಊಹಿಸಲು ಬರುವಂತಿದೆ. ಇದಕ್ಕೆ ಆಧಾರವಾಗಿ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕೈಬರಹದ ಹೊತ್ತಿಗೆಯೊಂದರಲ್ಲಿರುವ,

ತಂದೆ ಕುಂಬಾರಮಲ್ಲ, ತಾಯಿ ಮಳಲಾದೇವಿ

ಇಂದು ಶೇಖರನ ವರಪುತ್ರ ಧರಣಿಗೆ

ಬಂದು ಜನಿಸಿದ ಸರ್ವಜ್ಞ

ಎಂಬ ವಚನವನ್ನು ನೋಡಲು ಸಾಧ್ಯ."[7] ಸರ್ವಜ್ಞನು ಉಳಿದೆಲ್ಲ ವೃತ್ತಿಯ ಗುಣ –ದೋಷಗಳನ್ನು ಹೇಳಿ, ಕುಂಬಾರರ ಬಗೆಗೆ ಮಾತ್ರ ವಿಶೇಷ ಅಭಿಮಾನವನ್ನು ವ್ಯಕ್ತಪಡಿಸಿದ್ದು ಮೇಲಿನ ಅಭಿಪ್ರಾಯಕ್ಕೆ ಪೋಷಕವಾಗಿದೆ. ಆದರೆ ಸರ್ವಜ್ಞನ ಜನನದ ವಿಷಯವಾಗಿ ಖಚಿತವಾದ ನಿರ್ಣಯಕ್ಕೆ ಬರಲು ಯಾವ ಸಬಲ ಆಧಾರವೂ ದೊರೆಯುವುದಿಲ್ಲ.

ಸರ್ವಜ್ಞ ಹೇಳಿಕೊಂಡಿರುವಂತೆ 'ಅಬಲೂರು' ಎಂಬುವುದು ಹಾವೇರಿ ಜಿಲ್ಲೆಯ ಹಿರೇಕೆರೂರಿಗೆ ಸಮೀಪದಲ್ಲಿರುವ ಒಂದು ಗ್ರಾಮ. ಮಾಸೂರಿಗೂ, ಅಬಲೂರಿಗೂ ಸುಮಾರು ಆರು ಮೈಲುಗಳ ಅಂತರವಿದೆ. 'ಅಬಲೂರು' ಎಂಬುವುದು ಒಂದು ಐತಿಹಾಸಿಕ ಸ್ಥಳ. ಬಸವಣ್ಣನ ಸಮಕಾಲೀನನಾದ ಮಾಹೇಶ್ವರ, ಏಕಾಂತ ರಾಮಯ್ಯನು ಜೈನರೊಡನೆ ಸಂಹಾರ ನಡೆಸಿ, ತಲೆಕತ್ತರಿಸಿಕೊಂಡು ವಾರದ ನಂತರ ಮತ್ತೆ ಪಡೆದ ಪವಾಡದ ಪ್ರಸಂಗ ನಡೆದುದು ಇದೇ ಅಬಲೂರಿನಲ್ಲಿ.

ಸರ್ವಜ್ಞನ ವಚನಗಳಲ್ಲಿ ಸಾವಿಗಂಜದ ಈ ನಾಡಿನ ರಣವೀರರನ್ನು ಕಣ್ಮುಟ್ಟ ಕಂಡಂತೆ ಬಣ್ಣಿಸಿದ್ದು, ಸರ್ವಜ್ಞನು ಅಬಲೂರು – ಮಾಸೂರು ನಾಡಿನವನೇ ಎಂಬುದಕ್ಕೆ ಒಂದು ಬಲವಾದ ಆಂತರಿಕ ಕಾರಣವೆನ್ನಬಹುದು.

ಸರ್ವಜ್ಞನ ವ್ಯಕ್ತಿತ್ವ ಅನಿಕೇತನವಾದದ್ದು. ನಿಂತಲ್ಲಿ ನಿಲ್ಲದೆ ಗಾಳಿಯಂತೆ ಅಲೆದವನು ಇವನು. "ಮಂಡೆ ಬೋಳಿಸಿಕೊಂಡು ತುಂಡು ಗಂಬಳಿ ಹೊದೆದು ಹಿಂಡನಗಲಿದ ಗಜದಂತೆ" ಸುತ್ತಿದವನು. ಕೈಯಲ್ಲೊಂದು ಕಪ್ಪರವನ್ನು ಹಿಡಿದು, ಹಿರಿದಾದ ನಾಡು ಎದುರಿಗಿರುವಾಗ ಪರಮೇಶನೆಂಬ ನಾಮವನ್ನು ನೆಚ್ಚಿ, ತಿರಿಯುತ್ತಲೇ ಊರೂರು ಸುತ್ತಿದ ಚಾರಣ ಕವಿ ಈತ. ಅಲ್ಲಮಪ್ರಭುವನ್ನು ಬಹುಮಟ್ಟಿಗೆ ನೆನಪು ತರುವ ಈ ಜಂಗಮನಿಗೆ ನೆಲವೇ ಹಾಸಿಗೆ, ಆಕಾಶವೆ ಹೊದಿಕೆ. ತನ್ನ ಪೂರ್ವೋತ್ತರಗಳನ್ನು ಕಳಚಿ ಎಸೆದು ಬಹುಮಟ್ಟಿಗೆ ದಿಗಂಬರನಾದ ಇಂಥವನು ತಂದೆ, ತಾಯಿ ಹಾಗು ಹುಟ್ಟಿನ ಗುಟ್ಟುಗಳನ್ನು ಬೆದಕಿ ಇವನ ಕೆಲವು ತ್ರಿಪದಿಗಳಲ್ಲಿ ಗುರುತಿಸಬಹುದೆನ್ನುತ್ತಾರೆ ಕೆಲವರು.

"ವಾಸ್ತವವಾಗಿ ಅವನ ತಂದೆ – ತಾಯಿ ಹಾಗೂ ಸರ್ವಜ್ಞ ಹುಟ್ಟಿದ್ದು ಹೇಗೆ ಎಂಬುದನ್ನು ಹೇಳುವ ತ್ರಿಪದಿಗಳೂ ಯಾರೂ ಕಟ್ಟಿ ಸೇರಿಸಿದವುಗಳೆಂದೇ ನಮ್ಮ ಅಭಿಪ್ರಾಯ. ಕುಂಬಾರ ಮಾಳಿಯಲ್ಲಿ ದ್ವಿಜೋತ್ತಮನೊಬ್ಬನಿಗೆ ಹುಟ್ಟಿದವನು ಸರ್ವಜ್ಞ – ಎಂಬ ಕತೆಯಲ್ಲಿ ಈ ದೇಶದ ಪ್ರತಿಭೆಯೆಲ್ಲವೂ ಪ್ರತಿಷ್ಠಿತ ವರ್ಣದ ಬೀಜದ ಬೆಳಸು ಎಂಬ ಪ್ರಬಲವಾದ ಸಂದೇಹ ನಮಗೆ, ಇನ್ನು ಒಂದೆರಡು ತ್ರಿಪದಿಗಳಲ್ಲಿ ಆತನನ್ನು ಕೈಲಾಸದ ಪನ್ನಗಧರನ ಗಣಗಳಲ್ಲಿ ಒಬ್ಬನಾದ ಪುಷ್ಪದತ್ತನೆ ಈತ, ಎಂದು ಅಲೌಕಿಕ ಸ್ತರದವರೆಗೂ ಈತನ ಭವವನ್ನು ಎತ್ತಿದ್ದಾರೆ. ಸರ್ವಜ್ಞನ ಬದುಕಿನ ಬಗೆಗೆ ಉಳಿದದ್ದೇನೂ ತಿಳಿಯದೆ ಹೋಗಿರುವಾಗ, ಅವನ ಜನನ, ತಂದೆ ತಾಯಂದಿರ ವಿಚಾರವನ್ನು ಕುರಿತ ತ್ರಿಪದಿಗಳು ಮಾತ್ರ ಸಾಚಾ ಎಂದು ನಂಬುವುದು ಕಷ್ಟ".[8*]

---

* ಸರ್ವಜ್ಞನು ಜನನ ವೃತ್ತಾಂವನ್ನು ಹೇಳುವ ಈ ತ್ರಿಪದಿಗಳು ಕೈ ಬರಹದ ಪ್ರತಿಗಳಲ್ಲಿ ಏಕರೂಪವಾಗಿ ಬಂದಿಲ್ಲ. ಹಾಗೆಯೇ ಸಂಪಾದನೆಯ ಸಿದ್ಧವೀರಣ್ಣದೇವರು ಸಂಗ್ರಹಿಸಿರುವ ಸರ್ವಜ್ಞ ಮೂರ್ತಿಯ ಆಚರಣೆಯ ಸಂಬಂಧದ ತ್ರಿಪದಿಗಳಲ್ಲಿ ಇಲ್ಲವೇ ಇಲ್ಲ. ಅಲ್ಲದೆ ಸರ್ವಜ್ಞನ ತ್ರಿಪದಿಗಳಲ್ಲಿ ಪ್ರಕ್ಷೇಪಗಳು ವಿಶೇಷವಾಗಿ ಈಗಲೂ ನಿಜವಾಗಿ ಸರ್ವಜ್ಞನವು ಎಷ್ಟೆಂಬುದನ್ನು ನಿರ್ಣಯಿಸುವುದು ದುಃಸಾಧ್ಯವಾಗಿರುವಾಗ ಆತನ ಹುಟ್ಟನ್ನು ಕುರಿತು ಹೇಳುವ ತ್ರಿಪದಿಗಳು ಮಾತ್ರ ಪ್ರಕ್ಷೇಪವಲ್ಲವೆಂದು ಹೇಳಲು ಆಧಾರವಿಲ್ಲ. ಅಲ್ಲದೆ ತನ್ನ ತಂದೆ–ತಾಯಂದಿರ ಪ್ರಣಯದ ಸಂಗತಿಯನ್ನು, ಮಗನಾದವನು ಹೇಳುವುದು, ಅದೂ ಅ ಸಂದರ್ಭವನ್ನು ಗಮನಿಸಿದರೆ ತೀರಾ ಅಸಂಭವವೆನಿಸುತ್ತದೆ.

## ೨. ಸರ್ವಜ್ಞನ ಕಾಲದ ವಿಚಾರ :-

ಸರ್ವಜ್ಞನ ಕಾಲ ನಿರ್ಣಯವು ಒಂದು ಜಟಿಲ ಪ್ರಶ್ನೆಯೇ ಸರಿ. ಸರ್ವಜ್ಞನು 16ನೇ ಶತಮಾನಕ್ಕೂ ಹಿಂದಿನವನು ಎಂಬ ಮತವನ್ನು 'ಇ. ಪಿ. ರೈಸ್' ಅವರು ಒಪ್ಪುತ್ತಾರೆ. 'ಉತ್ತಂಗಿ ಚೆನ್ನಪ್ಪನವರು' ಕೂಡ ಸರ್ವಜ್ಞ 16ನೇ ಶತಮಾನದವನು ಎಂದು ಸಮರ್ಥಿಸುತ್ತಾರೆ. ಕೆಲವರು ಸರ್ವಜ್ಞನು ತೆಲುಗು ಕವಿ ವೇಮನನ (ಕ್ರಿ.ಶ.1450) ಸಮಕಾಲೀನನೆಂದು ಹೇಳುತ್ತಾರೆ.

'ಬಿ. ಶಿವಮೂರ್ತಿಶಾಸ್ತ್ರಿಗಳು' ನಾಲ್ಕು ಜನ ಸರ್ವಜ್ಞರಿರಬೇಕೆಂದು ಊಹಿಸಿ, ತ್ರಿಪದಿಗಳನ್ನು ರಚಿಸಿದ ಸರ್ವಜ್ಞ ಮೂರ್ತಿಯ ಶೂನ್ಯ ಸಂಪಾದನೆಯ ಸಿದ್ಧವೀರಣಾರ್ಯರಿಗೆ (1600) ಹಿಂದಿನವನಾಗಿರಬೇಕೆಂದು ವಾದಕ್ಕೆ ಮನ್ನಣೆ ನೀಡಿರುವರು. ಸರ್ವಜ್ಞನ ಹೆಸರಿನಲ್ಲಿ ಬಳಕೆಯಲ್ಲಿರುವ 'ಕಾಲಜ್ಞಾನ'ದಲ್ಲಿ ವಿಜಯನಗರದ ನಾಶ (1566), ಶ್ರೀರಂಗಪಟ್ಟಣವು ಆಂಗ್ಲರ ಕೈ ಸೇರಿದುದು (ಕ್ರಿ.ಶ1799) ಮೊದಾಲಾದ ಐತಿಹಾಸಿಕ ಸಂಗತಿಗಳ ಉಲ್ಲೇಖವಿರುವುದರಿಂದ, ಎಫ್. ಕಿಟಲ್ ಅವರು ಸರ್ವಜ್ಞನ ಕಾಲವು ಕ್ರಿ ಶ. 1800 ಎಂದು ಹೇಳಿದ್ದಾರೆ. ಆದರೆ ಕಾಲಜ್ಞಾನದ ವಚನಗಳು ಪ್ರಕ್ಷಿಪ್ತವಾಗಿರುವ ಸಂಭವವೇ ಹೆಚ್ಚು ಎಂದು ಅನೇಕರ ಅಭಿಪ್ರಾಯವಿದೆ. ಸರ್ವಜ್ಞನ ಕಾಲವನ್ನು ಈಗಿನ ಮಟ್ಟಿಗೆ ಕ್ರಿ. ಶ. 1300 – 1600 ರ ಮಧ್ಯವೆಂದು ಗಣಿಸಬಹುದು.

ಡಾ॥ ಎಂ.ಚಿದಾನಂದಮೂರ್ತಿಯವರು ಸರ್ವಜ್ಞನ ಕಾಲವನ್ನು ಕುರಿತು ಚರ್ಚೆ ಮಾಡಿದ್ದಾರೆ. "ಉತ್ತಂಗಿಯವರು ಸಂಪಾದಿಸಿರುವ ಸರ್ವಜ್ಞನ ವಚನಗಳ ಆವೃತ್ತಿಗಳು" ಎಂಬ ಲೇಖನದಲ್ಲಿ ಅವರು ಕೊಡುವ ಆಧಾರಗಳು ಇಂತಿವೆ.

* ಸರ್ವಜ್ಞನ ವಚನಗಳನ್ನು ಸಂಗ್ರಹಿಸಿರುವ ಶೂನ್ಯಸಂಪಾದನೆಯ ಸಿದ್ಧವೀರಣಾರ್ಯನ ಕಾಲ ಸುಮಾರು ಕ್ರಿ.ಶ.1600.
* ಸರ್ವಜ್ಞ ಸಿಡಿಮದ್ದಿನ ಪ್ರಸ್ತಾಪ ಮಾಡಿರುವುದರಿಂದ ಆತನ ಕಾಲ ಕ್ರಿ.ಶ. 15ನೇ ಶತಮಾನಕ್ಕಿಂತ ಈಚಿನದು.
* ಸರ್ವಜ್ಞನಲ್ಲಿ ಹೊಗೆಸೊಪ್ಪಿನ ಪ್ರಸ್ತಾಪವಿರುವುದರಿಂದ ಭಾರತಕ್ಕೆ ತಂಬಾಕಿನ ಪ್ರವೇಶವಾದದ್ದು ಸುಮಾರು ಕ್ರಿ.ಶ.1600.

ಆದ್ದರಿಂದ ಸರ್ವಜ್ಞನ ಜೀವಿತಾವಧಿ 1500 – 1600 ಆಗುತ್ತದೆ. ಡಾ॥ ಎಲ್. ಬಸವರಾಜು ಅವರು ಹಸ್ತಪ್ರತಿಗಳ ಆಧಾರದಿಂದ ಸರ್ವಜ್ಞ 1636ಕ್ಕಿಂತ ಹಿಂದೆ ಇದ್ದ ಎನ್ನುತ್ತಾರೆ.

ಸರ್ವಜ್ಞ, ತನ್ನ ಹೆಸರು ಇತ್ಯಾದಿಗಳ ಹಂಗನ್ನು ಹರಿದುಕೊಂಡು, ಅತ್ಯಂತ ವ್ಯಕ್ತಿ ನಿರಸನದ ಸಂತೋಷದಲ್ಲಿ ಬದುಕಿದಂತೆ ತೋರುವ ಈ ವ್ಯಕ್ತಿಗೆ ಕೊಟ್ಟದ್ದೇ ಹೆಸರು। ಇಂಥ ಕವಿಯ ಕಾಲದೇಶಾದಿ ಸಂಗತಿಗಳನ್ನು ನಾವು ನಿರ್ದಿಷ್ಟವಾಗಿ ಚೌಕಟ್ಟಿಸಿ ಹೇಳಲು ಸಾಧ್ಯವಿಲ್ಲ. ಅವನು ಹುಟ್ಟಿ ಇಂದಿಗೆ ನಾಲ್ಕು ನೂರು ವರ್ಷಗಳಾದುವೆಂಬುದು ನಮ್ಮ ಕಲ್ಪನೆಯೇ. ಆದರೆ ಇಷ್ಟು ಮಾತ್ರ ನಿಜ: ವಚನಕಾರರ ಕಾಲದಿಂದ ಈಚೆಗೆ, ಹದಿನಾರನೆಯ ಶತಮಾನದ ಒಳಗಿನ ಅವಧಿಯಲ್ಲಿ ಇದ್ದಂಥ ವ್ಯಕ್ತಿತ್ವ ಇದು. ಈ ವ್ಯಕ್ತಿತ್ವದ ಕೆಲವು ಗೆರೆಗಳನ್ನು ಸರ್ವಜ್ಞನವೆಂದು ಹೇಳಲಾದ ತ್ರಿಪದಿಗಳಲ್ಲಿ ಗುರುತಿಸುವುದು ಸಾಧ್ಯ ಎಂಬುದು 'ಜಿ.ಎಸ್.ಶಿವರುದ್ರಪ್ಪ'ನವರ ಅಭಿಪ್ರಾಯವಾಗಿದೆ.

### 3. ಸರ್ವಜ್ಞನ ಮತದ ವಿಚಾರ :

ಸರ್ವಜ್ಞ ಕವಿಯ ಪರಿಚಯಕ್ಕೆ ಹೊರಟಾಗ ಅವನ ಮತವನ್ನು ಕುರಿತು ವಿಚಾರ ಮಾಡುವುದು ಸಾಹಿತ್ಯ ಚರಿತ್ರೆಯ ಒಂದು ಸಂಪ್ರದಾಯ. ಆದರೆ ಸರ್ವಜ್ಞನು ಯಾವ ಮತದ ಕಟ್ಟಿಗೆ ಒಳಪಡುವ ವ್ಯಕ್ತಿಯಲ್ಲ. ಎಂಬುದು ಅವನ ವಚನಗಳಲ್ಲಿ ಮೂಡಿ ನಿಂತಿರುವ ಅವನ ಸ್ವತಂತ್ರ ವ್ಯಕ್ತಿತ್ವದಿಂದ ತಿಳಿದುಬರುತ್ತದೆ. ಸತ್ಯದ ಆರಾಧಕನಾದ ಅವನು ಒಳ್ಳೆಯದೆಲ್ಲವನ್ನೂ ಕಂಠೋಕ್ತವಾಗಿ ಹೊಗಳಿದನು. ಕೆಡುಕನ್ನು ನಿರ್ಭೀತಿಯಿಂದ ಕೆಡೆ ನುಡಿದನು.

"ಸರ್ವಜ್ಞ ಎಲ್ಲ ಕಾಲಕ್ಕೂ ಇರುವವನೇ ಕರಿಯನ್ನು ಕನ್ನಡಿಯಲ್ಲಿ ಹಿಡಿಸಿದಂತೆ ಬರೆದ ಆತನ ತ್ರಿಪದಿಗಳು ತ್ರಿಕಾಲದಲ್ಲಿಯೂ, ತ್ರಿಲೋಕದಲ್ಲಿಯೂ, ತ್ರಿಮತಸ್ಥರಲ್ಲಿಯೂ ಮನ್ನಣೆಗೆ ಅರ್ಹವಾಗಿದ್ದಾನೆ. "ತ್ರಿವಿಕ್ರಮ" ಎಂಬುದು ಆತನ ಅನ್ವರ್ಥಕ"[9]

ಸರ್ವಜ್ಞನ ಅಭಿಮತದಲ್ಲಿ ಜಾತಿಸೂಚಕ, ಅದು ಮಾನವನಿರ್ಮಿತ, ಸದಾಚಾರ-ಸದ್ವರ್ತನೆಗಳೇ ಮಾನವನ ಸಹಜಧರ್ಮ, ನೈಜಧರ್ಮ. ಅದಕ್ಕೆ ವ್ಯತಿರಿಕ್ತವಾದುದೆಲ್ಲ ಹೊಲೆಯಲ್ಲದೆ ಮತ್ತಿನದು ಹೊಲೆಯಲ್ಲ ಎಂದು 'ಆರ್. ಸಿ. ಹಿರೇಮಠ' ಅವರು ಸರ್ವಜ್ಞಕವಿ ಎಂಬ ಸಂಪಾದನಾ ಕೃತಿಯಲ್ಲಿ ಮಾರ್ಮಿಕವಾಗಿ ನುಡಿದಿದ್ದಾರೆ.

ಸರ್ವಜ್ಞ ಕವಿ ತನ್ನ ವಚನಗಳಲ್ಲಿ ಗುರು-ಲಿಂಗ-ಜಂಗಮ, ಷಟ್‌ಸ್ಥಲ-ಅಷ್ಟಾವರಣಗಳನ್ನು ವಿವರವಾಗಿ ಹೇಳಿದ್ದಾನೆ. ಆದ್ದರಿಂದ ಎ.ಆರ್. ಕೃಷ್ಣಶಾಸ್ತ್ರಿಯವರು ಸರ್ವಜ್ಞನು ವೀರಶೈವನೆನ್ನಬಹುದು ಎನ್ನುತ್ತಾರೆ. ಬಸವಣ್ಣನವರನ್ನಂತೂ ಅವನು ಆರಾಧ್ಯ ಪುರುಷನಂತೆ ಸ್ಮರಿಸಿದ್ದಾನೆ.

"ಬಸವನೆಂದರೆ ಪಾಪ ದೆಸೆಗೆಟ್ಟು ಪೋಗುವುದು" ಎಂಬ ವಿಶ್ವಾಸ ಸರ್ವಜ್ಞನ ಕವಿಯದು. ಈತನ ಮತ್ತೊಂದು ಆಶ್ವಾಸನ ಏನೆಂದರೆ,

ಬಸವ ಪೀಠವು ಎದ್ದು, ಎಸೆವ ನಾಣ್ಯವು ಹುಟ್ಟಿ
ಬಸವನಾ ಮುದ್ರೆ ಮೆರೆದಾವು, ಧರೆಯವಗೆ
ವಶವಾಗದಿಹುದೆ ಸರ್ವಜ್ಞ

ಆದರೂ ಸರ್ವಜ್ಞ ಕವಿಗೆ ವೀರಶೈವ ಧರ್ಮದ ಬಗ್ಗೆ ಅಂದಾಭಿಮಾನವಿಲ್ಲ. ಧರ್ಮದೊಳಗೆ ಬೆಳೆದು ಬಂದ ಮೂಢನಂಬಿಕೆಗಳನ್ನು ನಖಶಿಖಾಂತ ಅಲ್ಲಗಳೆಯಲು ಹಿಂಜರಿದಿಲ್ಲ.

ಸರ್ವಜ್ಞನ ತ್ರಿಪದಿಗಳನ್ನು ವಚನಗಳು ಎಂದು ಕರೆಯುವುದು ರೂಢಿಯಾಗಿರುವುದು ಮಾತಿಗೆ ಅವನು ಶಿಕ್ಷಕನಾಗಿದ್ದ ಎಂಬುದನ್ನು ಸೂಚಿಸುತ್ತದೆ. ಆದರೆ ಸರ್ವಜ್ಞನದು ಕೇವಲ ಮತೀಯ ದೃಷ್ಟಿಯಾಗಿರದೆ, ವಿಶಾಲದೃಷ್ಟಿಯ ಮಾನವಧರ್ಮವಾಗಿತ್ತು, ಎಂಬುದನ್ನು ನಾವು ಮರೆಯುವಂತಿಲ್ಲ.

ಸರ್ವಗ್ರಾಹ್ಯವಾದ ಮತಧರ್ಮ, ಮತಧರ್ಮವನ್ನು ಕುರಿತ ಮೇಧಾವಿ ಎಂಬ ಮಾತುಗಳನ್ನು, ಸರ್ವಜ್ಞನನ್ನು ಕುರಿತು ಹೇಳುವುದು ಕಷ್ಟ. ಅವನು ಜ್ಞಾನಿ, ಲೋಕ ಸ್ವರೂಪ ತಿಳಿದವನು. ನದಿಮೂಲ, ಋಷಿಮೂಲಗಳನ್ನು ಹುಡುಕುವುದು ಅನವಶ್ಯಕ ಎಂಬುವುದು ಬಲ್ಲವರ ಮತ. ನದಿ ಲೋಕಕ್ಕೆ ಸಂಪತ್ತನ್ನು ತುಂಬುತ್ತದೆ. ಋಷಿ ಲೋಕಕ್ಕೆ ಶ್ರೇಯೋಮಾರ್ಗವನ್ನು ಕಾಣಿಸುತ್ತಾರೆ. ಸರ್ವಜ್ಞ ಋಷಿ ಸಂಸಾರ ಪಂಕ್ತಿಗೆ ಸೇರಿದ ಮಹಾವ್ಯಕ್ತಿ. ಆತ ಜನ್ಮತಃ ಯಾವ ಮತೀಯನಾಗಿದ್ದನೊ, ಅಂತು ಜೀವನ ಸಾಗಿಸಿದಂತೆ ಆತನ ಒಲವು ವೀರಶೈವದ ಕಡೆಗೆ ವಾಲಿ ಶಿವ ಸರ್ವೋತ್ತಮತ್ವವನ್ನು ನಂಬಿಕೊಂಡ ವೀರಶೈವನೆನ್ನುವುದಕ್ಕೆ ಆತನ ವಚನಗಳಲ್ಲಿ ಸಾಕಷ್ಟು ಸಾಕ್ಷ್ಯಗಳಿರುತ್ತವೆ.

"ಕವಿವರ್ಯ ಬೇಂದ್ರೆ'ಯವರ ಮಾತನ್ನು ಇಲ್ಲಿ ಜ್ಞಾಪಿಸುವುದು ಸೂಕ್ತ.ಸರ್ವಜ್ಞನ ಜಾತಿ– ಮಾನವ ಜಾತಿ, ಅವನ ಮತ–ದೇವ ಮತ, ಅವನ ಕಾಲ– ಸರ್ವಕಾಲ. ಹೀಗೆ ತಿಳಿಯದೆ ವಾದ ಚರ್ಚೆಗಳಿಗಾಗಿ ಎಳೆದಾಡಿದರೆ ಹೂವಿನ ಸುಂಗಧವರಿಯದ ಹಸುಳೆ ಪಕಳೆಗಳ ಹಿಚುಕಾಡಿದಂತೆ ಸಂಭ್ರಮ"[10]

## 2. ಜನಪದ – ಜಾನಪದ ಕವಿಯಾಗಿ ಸರ್ವಜ್ಞ

ಜಾನಪದ ಸಾಹಿತ್ಯವು ಜನಜೀವನದ ರಮ್ಯ ಚಿತ್ರ, ಜನಜೀವನದ ರಸವಾಣಿ. ಜಾನಪದ ಸಾಹಿತ್ಯವು ಸಾಮಾನ್ಯವಾಗಿ ಯಾವ ಜನಾಂಗದಲ್ಲಿಯೂ ಗ್ರಂಥಸ್ಥವಾಗಲಿಲ್ಲ. ಅದು ಜನರ ಬಾಯಿಯಿಂದ ಬಂದುದು. ಜನಪದ ಸಾಹಿತ್ಯ ಅನುಭವದ ಮಾತುಗಳ ವಿದ್ಯುಲ್ಲತೆಯು ನೇರವಾಗಿ ಮನಕ್ಕೆ ತಾಗಿ, ಮನವು ವಿಕಾಸ ಹೊಂದಿ, ಇಡೀ ಮಾನವ ಪ್ರಪಂಚವನ್ನೇ ಆ ಬೆಳಕಿನಲ್ಲಿ ಕಾಣಲೆತ್ನಿಸುವುದು.

ಒಂದು ತಲೆಮಾರಿನಿಂದ ನಂಬಿಕೆ, ಧೋರಣೆ, ಸಂಪ್ರದಾಯ, ಪರಂಪರೆಗಳು ತೋಂಡಿಯಾಗಿ ಮುಂದಿನ ತಲೆಮಾರಿಗೆ ಸಾಗುತ್ತವೆ. ಜನಪದ ಸಾಹಿತ್ಯ ನೋಡಿ ಕಲಿಯುವಂತದಲ್ಲ. ಕೇಳಿಯೇ ಕಲಿಯುವಂತದ್ದು. ತೋಂಡಿತನ ಅದರ ಜೀವ. ಬರವಣಿಗೆಯ ಸ್ಪರ್ಶವಾದರೆ ಸಾಕು ಇದರ ಪರಂಪರೆ ಸತ್ತೇಹೋಗುವಂಥದು. ಒಬ್ಬ ಜನಪದ ಕಲಾವಿದ ಹಾಡು ಹೇಳುತ್ತಿದ್ದಾನೆಂದರೆ ಏಕಕಾಲಕ್ಕೆ ಆತ ಎರಡು ಕೆಲಸ ಮಾಡುತ್ತಿರುತ್ತಾನೆ.

ಒಂದು – ಹಾಡುತ್ತಾ ಹಾಡಿನ ಪರಂಪರೆಯನ್ನು ಉಳಿಸುವ ಕೆಲಸ.

ಎರಡು – ಅದೇ ಕಾಲಕ್ಕೆ ಹಿಂದಿರದ ಹೊಸ ಅಂಶಗಳನ್ನು ಸೃಷ್ಟಿಸುವ ಕೆಲಸ.

"ಜನಪದ ಸಾಹಿತ್ಯವು ಹಾಡು ಹಾಡುವುದಕ್ಕಾಗಿ ರಚಿಸಿದ ಗೀತೆಯಲ್ಲ. ಕಾಯಕದ ಜೊತೆಯಲ್ಲಿ ಹಾಡುವಾಗಲೇ ಸೃಷ್ಟಿಗೊಂಡ ಹಾಡು. ಹಾಡು ಎಂದರೆ ಈ ಹಾಡುಗಾರ ಹಚ್ಚಿದೊಡನೆ ಪುನಃ ಹಾಡುವ ರೆಕಾರ್ಡ್ ಅಲ್ಲ. "ಹಾಡುಗಾರ ಪ್ರದರ್ಶನಕಾರ ಮತ್ತು ಕವಿ ಈ ಮೂವರೂ ಒಬ್ಬನಲ್ಲಿಯೇ ಇದ್ದು, ಏಕಕಾಲಕ್ಕೆ ಪ್ರವೃತ್ತವಾಗುವ ಪವಾಡ. ಅವನ ಮಟ್ಟಿಗೆ ಹಾಡು, ಪ್ರದರ್ಶನ, ಸೃಷ್ಟಿ ಇವೆಲ್ಲ ಒಂದೇ ಕ್ರಿಯೆಯ ಬೇರೆ ಬೇರೆ ಅಂಗಗಳು."[11]

ಜಾನಪದವು ಸಂಸ್ಕೃತಿಯ ಒಂದಂಗ. ತೋಂಡಿಯಾಗಿ ತಲೆಮಾರಿನಿಂದ ತಲೆಮಾರಿಗೆ ಸಾಗುವಂತಹದ್ದು. ಜಾನಪದ ಕವಿಗಾದರೆ ನಾದದ ಒಂದು ಸಣ್ಣ ಭಾಗವೇ ಶಬ್ದ. ಅರ್ಥಕ್ಕಿಂತ ಅದರ ನಾದಮಯತೆಗೆ ಮೊದಲ ಪ್ರಾಧಾನ್ಯ. ಶಬ್ದಗಳ ಪ್ರಾಸಾನುಪ್ರಾಸ ನಾದದ ಗುಂಗು ಇವುಗಳ ಕಡೆಗೆ ಹೆಚ್ಚಿನ ಒಲವು ಇರುತ್ತದೆ.

"ಏಳುತಾಲೆ ಎದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆಯೋಳಾ। ಭೂಮಿತಾಯ
ಎದ್ದೊಂದು ಗಳಿಗೆ ನೆನೆದೇನು."

"ಜನ ಸಾಮಾನ್ಯರ ಸಾಹಿತ್ಯ ಈ ಜನಪದ ಸಾಹಿತ್ಯ. ಅವರು ವಿದ್ಯೆ ಕಲಿತು, ಶಾಸ್ತ್ರ ತಿಳಿದು, ಸುಶಿಕ್ಷಿತರೆನಿಸಿಕೊಳ್ಳದಿದ್ದರೂ ತಮ್ಮ ಭಾವನೆಗಳನ್ನು ನೇರವಾಗಿ ಪ್ರಕಟಿಸುವ ಈ ಜನಪದ ಸಾಹಿತ್ಯ ಬಾಳಿಗೆ ತೀರ ಸಮೀಪವಾದ ಸಾಹಿತ್ಯ."[12] ಸಾಮಾನ್ಯ ಜನರಿಂದ ಸಾಮಾನ್ಯ ಜನರಿಗಾಗಿ ಸೃಷ್ಟಿಸಲ್ಪಟ್ಟ ಈ ಸಾಹಿತ್ಯ ನಿರಂತರವೂ ಬಾಳುವಂತಹದು. ಜನರು ತಮ್ಮ ಸಂತೋಷ ವ್ಯಕ್ತಪಡಿಸಲು, ದುಃಖ-ದುಮ್ಮಾನ ಮರೆಯಲು ಹಾಡಿದರು, ಕಥೆಹೇಳಿದರು, ಒಗಟು, ಗಾದೆಗಳನ್ನು ಹೆಣೆದರು. ಜನಪದ ಸಾಹಿತ್ಯ ಬೆಳೆದು ಬರಲು ಜನ ತಮ್ಮ ಬಾಳಿನ ಪ್ರತಿ ಕ್ಷಣದಲ್ಲಿಯೂ ಹಾಡುವ ರೂಢಿ ಒಂದು ಕಾರಣವಾದರೆ, ಕುಟುಂಬಗಳ ವೃತ್ತಿಗಳೂ ಸಹ ಇನ್ನೊಂದು ಕಾರಣವಾದವು.

ಸರ್ವಜ್ಞನು ದಟ್ಟವಾದ ಜಾನಪದ ತಳಹದಿಯನ್ನುಳ್ಳ ಒಬ್ಬ ಕವಿಯಾಗಿದ್ದಾನೆ. ಜನಪದ ಬದುಕಿನಲ್ಲಿ ಕುಂತಲ್ಲಿ, ನಿಂತಲ್ಲಿ ಗಾದೆ- ಒಗಟು ಮಾತುಗಳನ್ನು ನಾವು ಕಾಣುತ್ತೇವೆ. ಸರ್ವಜ್ಞನು ಜನಪದ ಸಾಹಿತ್ಯದಲ್ಲಿ ಹೇರಳವಾಗಿ ಬಳಕೆಯಾಗಿರುವ ತ್ರಿಪದಿಯಲ್ಲಿ ರಚಿಸಿದ್ದಾನೆ.

ಜನಪದ ಅಂತಃಸತ್ವವನ್ನು ಹೀರಿ ಬೆಳೆದ ಈತ ತನ್ನ ಪರಿಮಿತಿಯಲ್ಲೇ ಸಾಮಾಜಿಕವಾದ ಸಮಸ್ಯೆಗಳ ವಿರುದ್ಧ ಪ್ರತಿಕ್ರಿಯಿಸಿದ ಕನ್ನಡದ ಪ್ರಸಿದ್ಧ ಜನಪ್ರಿಯ ಕವಿಯಾಗಿದ್ದಾನೆ. ಮಾತಿನ ದುಂದುಗಾರಿಕೆ ಜನಪದ ಸಾಹಿತ್ಯದ ಮುಖ್ಯ ಲಕ್ಷಣ. ಹಾಗೆಯೇ ಸರ್ವಜ್ಞನು ಕೂಡ ಮಾತುಗಾರ; ಹೇಳಿದ್ದನ್ನೇ ಹೇಳುವುದು ಉಂಟು. ಸಮಾಜದ ಎಲ್ಲಾ ಬಗೆಯ ಕೊಳೆ-ಕಸದ ಮೇಲೆಯೂ ಕಣ್ಣಿಟ್ಟು ಬಯ್ದು, ರೇಗಿ ಹೇಳಲೇಬೇಕಾದ ಅನಿವಾರ್ಯತೆ ಕಾಣುತ್ತದೆ. ಅನಕ್ಷರಸ್ಥ ಜನಗಳಿಂದಲೇ ತುಂಬಿದ ಸಮಾಜದಲ್ಲಿ ತೀರಾ ಸರಳವಾಗಿ ಅವರ ಮಾತಿನಲ್ಲೇ ಹೇಳಬೇಕೆಂದು ಬಯಸಿ ಹೊರಟದ್ದರಿಂದ ಸರ್ವಜ್ಞನಲ್ಲೂ ಮಾತು ಹೆಚ್ಚು. ಸ್ವಮತ ಪ್ರಚಾರಕ್ಕಿಂತ ಸರ್ವ ಸಾಮಾನ್ಯವಾದ ಲೋಕಹಿತದೃಷ್ಟಿಯನ್ನಿಟ್ಟು ಕೊಂಡಿದ್ದಾನೆ.

ಜನಪದ ಸಾಹಿತ್ಯ ಎನ್ನುವುದು ತಲೆಮಾರಿನಿಂದ ತಲೆಮಾರಿಗೆ ಮುಂದುವರಿಯುವ ಹಾಗೂ ಬರೀ ಬಾಯಿಯಿಂದ ಬಾಯಿಗೆ ಮೌಖಿವಾಗಿ ಸಾಗಿ ಬರುವಂತಹದ್ದಾಗಿರುವುದರಿಂದ ಸರ್ವಜ್ಞನ ಅಂಕಿತದಲ್ಲಿ ಎಷ್ಟೋ ಜನರು ತಮಗೆ ತಿಳಿದದ್ದನ್ನು ಹೇಳಿದ್ದಾರೆ. ನೈತಿಕ ಸಾಹಿತ್ಯವನ್ನು ಒದಗಿಸಿದವರಲ್ಲಿ ಪ್ರಮುಖನಾಗಿ ಕಂಡುಬಂದಿದ್ದರಿಂದ ಸರ್ವಜ್ಞನನ್ನು "ಜಾನಪದ ಕವಿ ಚಕ್ರವರ್ತಿ" ಎಂದು ಕರೆಯಲಾಗಿದೆ. ಆದ್ದರಿಂದಲೇ ಆ ಕಾರಣವಾಗಿ ಸರ್ವಜ್ಞನ ಪದ್ಯಗಳು ಪ್ರಕ್ಷಿಪ್ತವಾಗಿರುವ ಸಾಧ್ಯತೆಗಳು ಹೆಚ್ಚು.

ಜನಪದರಲ್ಲಿ ಮಹಿಳೆ ಕಡೆಗೋಲು ಹಿಡಿದು ಮೊಸರು ಕಡೆದು, ಹಸನಾದ ಬೆಣ್ಣೆ ತೆಗೆಯುವ ಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾಳೆ. ಸರ್ವಜ್ಞ ಕವಿ ಅದನ್ನು ಹೀಗೆ ಬಳಸಿಕೊಳ್ಳುತ್ತಾನೆ.

ಮೊಸರು ಕಡೆಯಲು ಬೆಣ್ಣೆ ಒಸೆದು ತೋರುವ ತೆರದಿ

ಹಸುವುಳ್ಳ ಗುರುವಿನುಪದೇಶದಿಂದ ಮುಕ್ತಿ

ವಶವಾಗದಿಹುದೇ ಸರ್ವಜ್ಞ

ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ

ಮತ್ತೆ ಪಾದದ ಕೆರವಾಗಿ-ಗುರುವಿನ

ಹತ್ತಿರಲು ಎಂದ ಸರ್ವಜ್ಞ

ಇದನ್ನು ಜಾನಪದ ಹಾಡಿನ ರೂಪದಲ್ಲಿ ಇಲ್ಲಿ ಉಲ್ಲೇಖಿಸಲಾಗಿದೆ.

ಜನಪದರ ಕಾಯಕವಾದ ಕೃಷಿಯಲ್ಲಿ ಎತ್ತಿನಂತೆ ಕರ್ಮಗೈಯುತ್ತ, ಮನೆಯ ಹಿಂದೆಯೇ ಇದ್ದು ಉಪಯುಕ್ತ ಔಷಧದ ರೂಪದಲ್ಲಿ ದೊರೆಯುವ ಹಿತ್ತಲಗಿಡವಾಗಿದ್ದು, ಇವು ಜನಪದರ ಕಾಯಕ ಮತ್ತು ಜನಪದ ವೈದ್ಯದಲ್ಲಿ ಬಳಕೆಯಾಗುವ ಭಾಷೆಯಾಗಿದೆ. ಈ ರೀತಿ ಎತ್ತು, ತೊತ್ತು, ಹಿತ್ತಲು, ಕೆರೆ ಮುಂತಾದ ಶಬ್ದಗಳನ್ನು ಚಲಾವಣೆಗೆ ತಂದು ವಚನಗಳಿಗೆ ಶಕ್ತಿ ತುಂಬಿದ್ದಾನೆ.

ಜನಪದರ ಬದುಕಿನ ರೀತಿಯೇ ಒಂದು ರೀತಿಯ ಸೋಜಿಗತರಿಸುವಂತಹದ್ದು. ತಮ್ಮನ್ನು ಕಾಪಾಡುವ ದೇವರನ್ನು ಒಂದು ಕಡೆ ಭಕ್ತಿ – ಭಾವದಿಂದ ಮೆರೆಸುತ್ತಾ ತಮ್ಮ ಬೇಡಿಕೆಗಳನ್ನು, ಅರಿಕೆಗಳನ್ನು ಸಲ್ಲಿಸುತ್ತಾ ಆರಾಧಿಸುತ್ತಾರೆ. ಸರ್ವಜ್ಞನಲ್ಲಿ ಮಾನವೀಯತೆ, ಧೈರ್ಯ ಮತ್ತು ಶೂದ್ರನ ಒರಟುತನವಿದೆ. ಸರ್ವಜ್ಞ ಕವಿಯ ಕೆಲವು ಜನಪದ ಗಾದೆಗಳನ್ನು ಹಿನ್ನೆಲೆಯಾಗಿಸಿಕೊಂಡು, ಅವುಗಳನ್ನು ವಿಸ್ತರಿಸಿ, ವಚನ ರಚಿಸಿರುವುದನ್ನು ಕಾಣಬಹುದು. ಜನಪದ ಗಾದೆಗಳಿಂದ ಪ್ರಭಾವಿತಗೊಂಡು ಗಾದೆಗಳಿಗೆ ಹೋಲುವಂತಹ ಬಿಡಿ ವಚನಗಳನ್ನು ಕೊಟ್ಟಿದ್ದಾನೆ.

ಜನಪದರಲ್ಲಿ ನಂಬುಗೆ-ನಿಷ್ಠೆ, ಪ್ರಾಮಾಣಿಕತೆ – ತಲ್ಲೀನತೆ ಮುಂತಾದವುಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವಂತಹ ವಿಚಾರಗಳಿದ್ದವು. ಇವುಗಳಲ್ಲದೇ ಯಾವುದೇ ಕೆಲಸವು ತನ್ನ ನಿರೀಕ್ಷಿತ ಫಲಿತಾಂಶವನ್ನು ನೀಡುವುದಿಲ್ಲ ಎಂದಿದ್ದಾನೆ. ಆದ್ದರಿಂದಲೇ ತನ್ನ ಒಂದು ವಚನದಲ್ಲಿ ಈ ರೀತಿ ಹೇಳಿದ್ದಾನೆ.

ಸರ್ವಜ್ಞನಲ್ಲಿರುವ ಮತ್ತೊಂದು ಪ್ರಮುಖ ಅಂಶವೆಂದರೆ, ಪ್ರತಿಯೊಂದನ್ನು ಪ್ರಶ್ನೆ ಮಾಡುವ ಪ್ರವೃತ್ತಿ ಡಂಭಾಚಾರದಲ್ಲಿರುವರನ್ನು ಯಾವುದೇ ಮುಲಾಜಿಲ್ಲದೇ ಪ್ರಶ್ನಿಸುತ್ತಾನೆ.

ಜನಪದರ ಬದುಕನ್ನು ಹತ್ತಿರದಿಂದಲೇ ನೋಡಿದ ಸರ್ವಜ್ಞ ಗಾದೆಗಳಿಗೆ ಸಂವಾದಿಯಾಗಿ ಹೋಲಿಕೆಯುಳ್ಳ ವಚನಗಳನ್ನು ಬರೆದಿದ್ದಾರೆ. ಸರ್ವಜ್ಞ ನಮಗೆ ತಿಳಿಸುವ ಮಾತು ಸಹ ಎಲ್ಲಾ ಕಾಲಕ್ಕೂ ಸಮಾಜದ ಎಲ್ಲಾ ಜನರಿಗೂ ಅನ್ವಯವಾಗುವಂತಹ ಮಾತು. ಜನಪದ ಬದುಕಿನ ಅಂಗಣದಿಂದ ಬಂದ ಪ್ರತಿನಿಧಿಯಾದ ಸರ್ವಜ್ಞ ತಾನೂ ಮುಕ್ತವಾಗಿರುವ ಮನಸ್ಸಿನವನೇ ಆಗಿದ್ದಾನೆ.

ಸರ್ವಜ್ಞನು ಕಂಡಿದ್ದನ್ನು ಕಂಡಂತೆ ಹೇಳುವ ಖಂಡಿತವಾದಿ. ಮನುಷ್ಯ ಸ್ವಭಾವವನ್ನು ಲೋಕದ ನಡೆವಳಿಕೆಯನ್ನು ಚೆನ್ನಾಗಿ ಕಂಡ ಅನುಭವಿ ಸರ್ವಜ್ಞನು ಸುತ್ತಣ ಜನರನ್ನು ತಿದ್ದುವ, ಸುಧಾರಕತನದ ಕಳಕಳಿಯಿಂದ ನುಡಿದಿದ್ದಾನೆ. ಸುತ್ತಣ ಜನರಾಡುವ ಆಡು ಮಾತಿಗೆ ವ್ಯಂಗ್ಯ, ಕಟಕಿ, ವಿನೋದ, ಸಹಾನುಭೂತಿ ಇತ್ಯಾದಿ ವೈವಿಧ್ಯಗಳ ಮೂಲಕ ಜನರ ಬದುಕನ್ನು ತಿದ್ದುತ್ತಾ, ನಿಜವಾದ ಅರ್ಥದಲ್ಲಿ ಜನತೆಯ ಕವಿಯಾಗಿದ್ದಾನೆ.

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ

ರಸಿಕನಲ್ಲದನ ಬರಿಮಾತು ಕಿವಿಗೆ ಕೂರ್

ದಸಿಯ ಬಡಿದಂತೆ ಸರ್ವಜ್ಞ

ಸರ್ವಜ್ಞ ವಚನಗಳು ಜನತೆಯ ತವನಿಧಿ, ಕಿರಿದರಲ್ಲಿ ಹಿರಿದರ್ಥವನ್ನು ತುಂಬಿಕೊಂಡಿರುವ ಜಾಣ್ನುಡಿಗಳು, ಕತ್ತಲೆಯ ಮನೆಗೆ ಮಣಿದೀಪಗಳು, ತ್ರಿಕಾಲಾಬಾಧಿತ ತಥ್ಯಗಳು. "ಲೋಕ ಕಲ್ಯಾಣ ಸಾಧಿಸಲು ಅಣಿಯಾದ ಜನಪದಯೋಗಿ ಕವಿ ಸರ್ವಜ್ಞ, ಸ್ವಮತ ಪ್ರಚಾರಕ್ಕಿಂತ ಸರ್ವ ಸಾಮಾನ್ಯವಾದ ಲೋಕ ಹಿತದೃಷ್ಟಿಯನ್ನಿಟ್ಟುಕೊಂಡ ಕನ್ನಡ ಕವಿಗಳಲ್ಲಿ ಸರ್ವಜ್ಞನಿಗೆ ಮಹತ್ವದ ಸ್ಥಾನವಿದೆ. ಜನಜೀವನವನ್ನು ಕುರಿತ ಸರ್ವಜ್ಞನ ನಿರೀಕ್ಷಣೆ, ವಿಮರ್ಶೆಗಳು ಮಾರ್ಮಿಕವಾಗಿವೆ."[13]

## 3. ಸರ್ವಜ್ಞನ ಭಾಷೆ ಮತ್ತು ಶೈಲಿ.

ಕವಿ ಸರ್ವಜ್ಞನ ಮಾತಿನ ಮೋಡಿ ಎಲ್ಲರನ್ನು ಮರುಳುಗೊಳಿಸಬಲ್ಲುದು. ಆತನ ಭಾಷಾ ವೈಖರಿಗೆ ಅವನು ಮಾತಿನಲ್ಲಿ ಬೆಳೆದು ಬಂದ ಆವರಣ ಅಪಾರವಾದ ಅನುಭವ ಕಾರಣವಾಗಿದೆ. ಸರ್ವಜ್ಞನಿಗೆ ಭಾಷೆ ಮುಖ್ಯವಲ್ಲ, ಭಾವ ಮುಖ್ಯ. ಆತನ ವಚನಗಳು ಗಾದೆ ಮಾತುಗಳಾಗಿವೆ.

ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ

ಇಚ್ಚೆಯನ್ನರಿವ ಸತಿಯಾಗೆ ಸ್ವರ್ಗಕ್ಕೆ

ಕಿಚ್ಚು ಹಚ್ಚೆಂದ ಸರ್ವಜ್ಞ

"ಪ್ರಾಸ" ಎಲ್ಲಾ ತ್ರಿಪದಿ ರಚನೆಗಳ ಒಂದು ಲಕ್ಷಣ. ಒಂದು ನಿಲುವಿನಿಂದ ನೋಡಿದರೆ ಪ್ರಾಸವೇ ಸರ್ವಜ್ಞನ ಮುಖ್ಯ ತಂತ್ರ, ಪ್ರಾಸವೇ ಅವನ ತ್ರಿಪದಿಯ ಜೀವಾಳ, ಜಯಮಾಲೆ.

"ಪ್ರಾಸವಿಲ್ಲದ ಪದವ ತಾಸು ಹಾಡಿದರೇನು

ಸಾಸಿವೆಯೆಣ್ಣೆ ಹದಮಾಡಿ। ಕಣ್ಣಿಗೆ

ಮೂಸಿಕೊಂಡಂತೆ ಸರ್ವಜ್ಞ"

ಪ್ರಾಸದಂತೆ ಸಾದೃಶ್ಯವೂ ಅವನ ದೊಡ್ಡ ಸೊತ್ತು, ದೊಡ್ಡಗೌರವ, ಉಪಮಾನ, ರೂಪಕಗಳು ಕವಿಗೆ ಒಂದಿಷ್ಟು ಪ್ರಯಾಸ ಕೊಡದೆ, ಓದುಗನಿಗೆ ಒಂದಿಷ್ಟು ಆತಂಕ ಉಂಟುಮಾಡದೆ, ಸಮಯಕ್ಕೆ ಸರಿಯಾಗಿ ಎಷ್ಟು ಬೇಕೋ ಅಷ್ಟು ಮುಂದೆ ಬರುತ್ತವೆ. ಸರ್ವಜ್ಞನ ಕಾವ್ಯೋದ್ದೇಶದಲ್ಲಿ ಕಿವಿಗೆ ಹಿತವಾದ ಇಂಪು ಜಾಗವನ್ನು ಪಡೆದಿತ್ತೋ ಇಲ್ಲವೋ ಹೇಳಲಾಗದು; ಬಹುಶಃ ಇಲ್ಲ. ಆದರೂ ಸಹಜ ಕವಿಯಾದ್ದರಿಂದ ಅವನ ನುಡಿಗಳಲ್ಲಿ ಕೆಲವು ಮಾಧುರ್ಯ ಪ್ರಮುಖವಾಗಿ ಹೊರಬಿದ್ದದ್ದು ಸರಿಯೆ. ಸರ್ವಜ್ಞನ ವಚನಗಳ ಹೇಳಿಕೆ, ಕೇಳುವವರ ಕಿವಿಗೆ ಹಿತವಾಗುವುದಕ್ಕಿಂತ ಮನಸ್ಸಿಗೆ ತಟ್ಟಬೇಕೆಂಬುದೇ ಸರ್ವಜ್ಞನ ಆಶಯ. ಬಲಿಷ್ಠ ಹೇಳಿಕೆಗಳೂ ಬಡಿದೆಬ್ಬಿಸುವ ಬಿರುನುಡಿಗಳೂ ಅವನಲ್ಲುಂಟು. ಸರ್ವಜ್ಞನ ತ್ರಿಪದಿಗಳಲ್ಲಿ ಕನ್ನಡ ದೇಸೀ ಶೈಲಿಯ ಪರಾಕಾಷ್ಠತೆಯನ್ನು ನಾವು ಕಾಣಬಹುದಾಗಿದೆ.

ವಿಜಯನಗರ ಸಾಮ್ರಾಜ್ಯದ ಪತನದ ನಂತರ ರಾಜಕೀಯ, ಧಾರ್ಮಿಕ, ಸಾಮಾಜಿಕ, ನೈತಿಕ, ರಂಗಗಳಲ್ಲಿ ಶೈಥಿಲ್ಯವು ತಲೆದೋರಿತು. ಅಂತಹ ಕಾಲದಲ್ಲಿ ಸರ್ವಜ್ಞನು ತನ್ನ ಸಿಡಿಲಿನಂತಹ ನುಡಿಗಳಿಂದ ಜನಮನವನ್ನು ಸಂಸ್ಕರಿಸುವ ಕಾರ್ಯವನ್ನು ಕೈಗೊಂಡನು. "ಕನ್ನಡದಲ್ಲಿ ತ್ರಿಪದಿ ಸಾಹಿತ್ಯಕ್ಕೆ ತಲೆಮಣೆ ಸರ್ವಜ್ಞ, ತ್ರಿಪದಿ ಚಿಕ್ಕದಾದರೂ ಅದೊಂದು ಸುಭಾಷಿತ, ನಾಟುನುಡಿ, ಸ್ವಾರಸ್ಯ ಏರುತ್ತಾ ಹೋಗಿ ಕೊನೆಯ ಸರ್ವಜ್ಞತ್ವದ ಹೊತ್ತಗೆ ತುತ್ತತುದಿಯನ್ನು ಮುಟ್ಟತಕ್ಕದು, ಎಂಬ ಡಾ॥ ಎಸ್.ವಿ.ರಂಗಣ್ಣನವರ ಅಭಿಪ್ರಾಯ ಉತ್ಕೃಷ್ಟವಾಗಿದೆ."[14]

ಸರ್ವಜ್ಞನು "ಅನುಭವದ ವೇದವೇ ವೇದ" ಎಂಬ ಸೂತ್ರವನ್ನು ತನ್ನ ಸ್ಫೂರ್ತಿ ಮಂತ್ರವೆಂದು ತಿಳಿದು ತನ್ನದೇ ಆದ ಅನುಭವ, ಆಲೋಚನೆ, ವಿಮರ್ಶೆಗಳಿಗೆ ತ್ರಿಪದಿಯನ್ನು ಹೇರಳವಾಗಿ ಬಳಸಿದ್ದು ಸೂಕ್ತವಾಯಿತೆಂದೇ ತೋರುತ್ತದೆ. ಅವನು ಬಹುಶಃ ಜನಪದ ಸಾಹಿತ್ಯದ ಧಾಟಿಗಳನ್ನು ಅರಿತಿದ್ದ ಕಾರಣ ಬಂಧದಲ್ಲಿ ಸ್ವಚ್ಛಂದತೆಗೆ ಅವಕಾಶ ಕೊಟ್ಟಿರಬೇಕು.

ಸರ್ವಜ್ಞ ಕವಿಯ ಭಾಷೆ ಸ್ವರೂಪವನ್ನು ನೋಡಿದರೆ ಆತನು 16-17ನೇ ಶತಮಾನದವನಾಗಿರಬೇಕು ಎನಿಸುತ್ತದೆ. 'ಅಬಲೂರು' ಪ್ರಾಂತ ಪುಲಿಗೆರೆಯ ತಿರುಳ್ಗನ್ನಡ ಪ್ರಾಂತವಾಗಿತ್ತು. ಸರ್ವಜ್ಞನ ಕಾಲವಾದ ಕ್ರಿ.ಶ.16ನೆಯ ಶತಮಾನದ ಹೊತ್ತಿಗೆ, ಧಾರವಾಡ ಕನ್ನಡ ಎಂಬ ಉಪಭಾಷೆ ರೂಪಗೊಂಡಿದ್ದಿರಬೇಕು. ಆದರೆ, ಸರ್ವಜ್ಞನ ತ್ರಿಪದಿಗಳಲ್ಲಿ ಎಲ್ಲ ಶಿಷ್ಟ ಕವಿಗಳಂತೆ, ಅವನ ಪ್ರದೇಶದ ಉಪಭಾಷೆ ಕಾಣಿಸಿಕೊಳ್ಳದಿರುವುದು ಆಶ್ಚರ್ಯದ ಸಂಗತಿ. ಜನಪದ ಕವಿಯಾಗಿದ್ದರಿಂದ, ತನ್ನ ಪ್ರದೇಶದ ಪ್ರಾದೇಶಿಕ ಉಪಭಾಷೆಯನ್ನಾಗಲಿ, ತಾನು ಕುಂಬಾರನ ವಂಶದವನಾದರೆ, ಆ ಕುಂಬಾರರಿಗೆ ವಿಶೇಷವಾದ ಸಾಮಾಜಿಕ ಉಪಭಾಷೆಯನ್ನಾಗಲಿ ಸರ್ವಜ್ಞ ಏಕೆ ಉಪಯೋಗಿಸಿಲ್ಲ ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

ಸರ್ವಜ್ಞನ ಉಕ್ತಿ ಮೊಟಕು, ಸ್ವಸಂಪೂರ್ಣ ಉಜ್ವಲ. "ಕಿರಿಯದರಲ್ಲಿ ಪಿರಿದರ್ಥಮಂ" ಕಾಣಿಸುವ ಸೊಗಸಿನದು. ಸರ್ವಜ್ಞನು ಬಳಸಿದ ಪದ ಪುಂಜಗಳೂ, ಸಮಯಗಳೂ, ಜೀವನದಲ್ಲಿನಂತೆಯೇ ಹುಟ್ಟಿದ್ದವು.

ಸರ್ವಜ್ಞನ ಶೈಲಿಯನ್ನು ಕುರಿತು ಶ್ರೀ ಎಸ್.ವಿ. ರಂಗಣ್ಣನವರು ಮಾಡಿದ ಸಮರ್ಪಕ ವಿವೇಚನೆಯನ್ನು ಇಲ್ಲಿ ನೆನೆಯುವುದು ಅವಶ್ಯ. ಪ್ರತಿಯೊಂದಕ್ಕೂ ಅನ್ಯ ಪದ್ಯಗಳನ್ನು ಬೇಡದ ಸಮಗ್ರತೆಯುಂಟು, ಭರವಸೆಯುಂಟು, ಆತ್ಮ ತೃಪ್ತಿಯುಂಟು. ಹತ್ತೆಂಟು ತ್ರಿಪದಿಗಳನ್ನು ವಿಷಯ ಸಾಮ್ಯದಿಂದ ಒಟ್ಟುಗೂಡಿಸಬಹುದು. ಆದರೆ ಒಟ್ಟುಗೂಡಿಕೆಯಿಲ್ಲದಿದ್ದರೆ ತನ್ನ ಭಾವಾರ್ಥವನ್ನು ಪೂರ್ತಿ ಹೊರಗೆಡಹುವುದಿಲ್ಲವೆಂದು ವಾದಿಸಹೋದರೆ ನಿಜಾಂಶಕ್ಕೆ ಊನ ಮಾಡಿದಂತೆ ಸ್ವಯಂ ಪೂರ್ಣತೆಯ ಸಂದರ್ಭದಲ್ಲಿ ಇದರೊಂದಿಗೆ ಪರಿಶೀಲಿಸಬಹುದು.

ಸರ್ವಜ್ಞನು ಪ್ರೌಢವಾದ ಅಲಂಕಾರಗಳ ಗೋಜಿಗೆ ಹೋಗುವುದಿಲ್ಲ, ಉಪಮಾಲಂಕಾರವೊಂದೇ ಅವನಿಗೆ ಸಾಕು; ಅದು ಯಥೇಚ್ಛವಾಗಿದೆ; ಕವಿಗೆ ಅದೇ ಒರೆಗಲ್ಲು. ಸರ್ವಜ್ಞನ ತ್ರಿಪದಿಗಳು ಭಾವ, ಭಾಷೆ, ಶೈಲಿಗಳಲ್ಲಿ ವಚನವಾಙ್ಮಯವನ್ನು ಹೋಲುತ್ತವೆ. ಇವುಗಳ ತಿರುಳು ಕೂಡ ಅಲ್ಲಿನಂತೆಯೆ. ಷಟ್‌ಸ್ಥಲ,

ಅಸ್ಪ್ರಾವರಣ, ಜಾತಿಭೇದ ನಿರಾಕರಣಗಳು ಇವನ್ನು ಸತ್ಯ ನಿಷ್ಠೂರವಾಗಿ ನಿರೂಪಿಸುತ್ತವೆ. ಆಡುವವನ ಹೃದಯ ವೈಶಾಲ್ಯ, ಬುದ್ಧಿತೀಕ್ಷ್ಣತೆಗನುಗುಣವಾಗಿ ಭಾಷೆ ವಿಶಾಲವಾಗುತ್ತದೆ.

ಈ ಬಗೆಯ ಖಂಡಿತವಾದಿ ಭಾಷಾ ಸೌಂದರ್ಯ, ನಯ, ಸಂಸ್ಕಾರಗಳಿಗಾಗಿ "ಬರೆಬರೆದು ತೊಟ್ಟನೆ ತೊಡೆದು ತಿದ್ದಿದವನಲ್ಲ;" 'ಹಲಗೆ ಬಳಪವ ಹಿಡಿಯದೊಂದಗ್ಗಳಿಕೆಯವನು.' ಇಲ್ಲಿ ಭಾವತೀವ್ರತೆಗೆ, ಭಾವತೀಕ್ಷ್ಣತೆಗೆ ಅನುಗುಣವಾಗಿ ಭಾಷೆಯ ಮಹಾಪೂರ. ಪಂಡಿತ ಮಾನ್ಯ ಕವಿಗಳ ಸಂಸ್ಕೃತ ಭೂಯಿಷ್ಠವಾದ, ದೀರ್ಘಸಮಾಸ ಘಟಿತವಾದ ಶೈಲಿ ಸರ್ವಜ್ಞನದಲ್ಲ. ಭಾವವನ್ನೆಲ್ಲ ರೂಪಕದಲ್ಲಿ ಹಿಡಿದಿಟ್ಟು ಪರಿಣಾಮಕಾರಿಯಾಗಿ ಮಾಡಿರುವುದು ಸರ್ವಜ್ಞನ ಶೈಲಿಯ ಹಿರಿಮೆ. ದೃಷ್ಟಾಂತಗಳು ಸರ್ವಜ್ಞನ ಉಸಿರಿದ್ದಂತೆ. ಅವು ಸಹಜವಿರುವಂತೆ ರಮ್ಯವೂ ಆಗಿವೆ. ಕವಿಯ ಶೈಲಿಯನ್ನು ಚರ್ಚಿಸುವಾಗ ಭಾಷೆಯನ್ನು ಗಮನಿಸಬೇಕಾಗುವುದು ಮಹತ್ವಪೂರ್ಣವಾದದ್ದು.

ಸರ್ವಜ್ಞನು ಸಂಸ್ಕೃತರ ಸಂಸ್ಕೃತ ಕವಿಯಲ್ಲ. 'ಪ್ರಾಕೃತ ಕವಿ' ಎಂದು ಸರ್ವಜ್ಞ ತಜ್ಞರೆಂದು ಪ್ರಸಿದ್ಧರಾದ ಚೆನ್ನಪ್ಪ ಉತ್ತಂಗಿಯವರು ಹೇಳಿದ ಮಾತು ಸರ್ವಜ್ಞನ ಭಾಷಾ ಶೈಲಿಗೂ ಅನ್ವಯಿಸುತ್ತದೆ. ಸಹಜ, ಸುಲಭ. ಅಚ್ಚಗನ್ನಡ ಪದ್ಯಗಳಲ್ಲಿಯೇ ತನ್ನ ಅಭಿಪ್ರಾಯಗಳನ್ನು ಸಮರ್ಪಕವಾಗಿ ವ್ಯಕ್ತ ಪಡಿಸುತ್ತಾನೆ. ಭಾಷಾ-ಶೈಲಿಯಲ್ಲಿಯೂ ಅವನು ದೇಸಿ ತತ್ವಕ್ಕೆ ಮನ್ನಣೆ ಕೊಟ್ಟಿದ್ದಾನೆ.

ಸರ್ವಜ್ಞನು ಖಂಡಿತವಾದಿಯಾದುದರಿಂದ, ಸುಸಂಸ್ಕೃತರೆನ್ನುವವರು ಮೆಚ್ಚದ ದೇಸಿಯನ್ನು ಅವನು ಬಳಸುತ್ತಾನೆ. ಅಂಥಲ್ಲಿ ದೇಸಿಯ ಸೊಬಗಿನೊಡನೆ ಗ್ರಾಮೀಣ ಒರಟುತನವನ್ನೂ ಕಾಣುತ್ತೇವೆ. "ಸ್ವರ್ಗವನು ರಂಡೆಯಾಳುವಳೆ?" "ಕೈಲಾಸ ರಂಡೆಯಹೊರಸೆ?" ಎಂಬಂತಹ ಮಾತುಗಳಲ್ಲಿ ಆ ಒರಟುತನ ಕಂಡುಬರುತ್ತದೆ. ಅಂತೆಯೇ 'ತಿರುಮಲ ತಾತಾಚಾರ್ಯಶರ್ಮ' ಅವರು "ಸರ್ವಜ್ಞನು ವಿಪ್ಲವ ಮೂರ್ತಿ, ಸಿಡಿಲುಣಿ. ಅವನೊಂದು ಜ್ವಾಲಾಮುಖಿ. ಆ ಮುಖದಿಂದ ಹೊರಬೀಳುವುದೆಲ್ಲ ವಚನಗಳಲ್ಲ; ರಚನೆಗಳು-ವಿದ್ಯುತ್ಕಣಗಳು"[15] ಎಂದಿದ್ದಾರೆ.

ವೈವಿಧ್ಯ ಪೂರ್ಣವಾದ, ವಿಶ್ವ ವ್ಯಾಪಕವಾದ ವಿಷಯಗಳನ್ನೂ ಕುರಿತು ವಚನಗಳನ್ನು ರಚಿಸಿದ ಕವಿ ಸರ್ವಜ್ಞನ ಶೈಲಿ ಗಂಡು ಶೈಲಿ. ಸಂಪ್ರದಾಯ ಶರಣರಿಗೆ ಸಂಪ್ರದಾಯಶೀಲವಾಗಿ, ಆಧುನಿಕರಿಗೆ ಆಧುನಿಕವಾಗಿ, ನವ್ಯರಿಗೆ ಅತಿ ನವ್ಯವಾಗಿ ಕಾಣುವ ಆತನ ಕಾವ್ಯ ಶೈಲಿ ಲೋಲಕದಂತಿದೆ. ಅವನ ಭಾಷೆ ಅದರಲ್ಲಿ ಕಾಣುವ ವಿವಿಧ ಬಣ್ಣಗಳಂತೆ. ಸರ್ವಜ್ಞನ ಕಾವ್ಯ ಶೈಲಿ – ಇಂದ್ರ ಧನುಸ್ಸಿನಂತೆ ಮನೋಹರ, ಆಕರ್ಷಕ; ರಾಮಕೋದಂಡದಂತೆ ಅನೀತಿ ಘಾತಕ, ಅನಿಷ್ಟ ನಾಶಕ. ಕವಿ ಸರ್ವಜ್ಞ ಬಳಸುವ ಭಾಷೆಯು

ಅತ್ಯಂತ ಸರಳವೂ – ಲಯಬದ್ಧವೂ ಆಗಿದೆ. ಜನಪದ ತ್ರಿಪದಿಗಳಂತೆ ಸರ್ವಜ್ಞನ ತ್ರಿಪದಿಗಳು ವಸ್ತುವಿನಲ್ಲಾಗಲೀ, ಭಾಷೆ ಮತ್ತು ಶೈಲಿಯಲ್ಲಾಗಲೀ ತುಂಬಾ ಸರಳತೆಯನ್ನು ಒಳಗೊಂಡಿವೆ. ಸರ್ವಜ್ಞನು ಬಳಸಿರುವ ಭಾಷೆ – ಶೈಲಿ – ವಸ್ತುವಿನ ಬಿಗಿಯಾದ ಬಂಧ ಮುಖ್ಯವಾಗಿದೆ.

## 4. ಕವಿ ಸರ್ವಜ್ಞನ ಅಂಕಿತದ ಪ್ರಶ್ನೆ

ಕನ್ನಡ ಸಾಹಿತ್ಯದಲ್ಲಿ ನಮಗೆ ಹೆಸರು, ಕಾಲ, ದೇಶ ಮುಂತಾದವುಗಳನ್ನು ಕುರಿತು ಹಲವಾರು ಕವಿಗಳ ಬಗ್ಗೆ ಸರಿಯಾದ ಪರಿಚಯ ಅಥವಾ ನಿಗದಿತವಾದ ಮಾಹಿತಿಯು ಇನ್ನೂ ದೊರೆಯದಿರುವುದು ಕಂಡುಬರುತ್ತದೆ. ಈ ಸಾಲಿನಲ್ಲಿ ನಿಲ್ಲಬಹುದಾದ ವ್ಯಕ್ತಿ ಸರ್ವಜ್ಞ ಕನ್ನಡ ಸಾಹಿತ್ಯದಲ್ಲಿ ತನ್ನದೇ ವಿಶಿಷ್ಟವಾದ ಮಾರ್ಗವನ್ನು ಹೊಂದಿದವನು ಸರ್ವಜ್ಞ, ಈತನ ಕಾಲದ ಬಗ್ಗೆ, ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳು ಕಂಡುಬರುತ್ತದೆ. ಇಂದಿಗೂ ಈತನ ಬಗ್ಗೆ ನಿಖರವಾದ ಮಾಹಿತಿಯನ್ನು ಒಳಗೊಂಡ ಯಾವುದೇ ಶಾಸನವಾಗಲಿ ಅಥವಾ ಬರಹಗಳಾಗಲಿ ದೊರೆಯದೇ ಇರುವುದು ವಿಷಾದನೀಯವಾದ ವಿಷಯ.

'ಅಂಕಿತ' ಎಂದರೆ ಗುರುತು, ರುಜು ಎಂದು ಕರೆದರೆ, ಅಂಕಿತನಾಮ ನಾಮಪದಗಳಿಗೆ ಇಟ್ಟ ಹೆಸರು, ವ್ಯಕ್ತಿವಾಚಕ ಹೆಸರು ಎಂದರ್ಥ. ಆದ್ದರಿಂದ 'ಅಂಕಿತ'ಕ್ಕೂ ಮತ್ತು ಅಂಕಿತನಾಮಕ್ಕೂ ವ್ಯತ್ಯಾಸವಿದೆ. ಉದಾ:– 'ರಾಮನಾಥ' ಎಂಬುದು ದಾಸಿಮಯ್ಯನ ವಚನಗಳ ಅಂಕಿತವಾದರೆ, 'ಕುವೆಂಪು' ಎಂಬುದು ಕೆ.ವಿ. ಪುಟ್ಟಪ್ಪನವರ ಅಂಕಿತನಾಮವಾಗಿ, ಸಾಮಾನ್ಯವಾಗಿ ಬಳಕೆಯಲ್ಲಿ ಕಂಡುಬಂದಿದೆ.

ಸರ್ವಜ್ಞನ ವಚನಗಳಲ್ಲಿ 'ಸರ್ವಜ್ಞ' ಅಂಕಿತದಿಂದ ಕೊನೆಗೊಳ್ಳುವುದು ಒಂದು, ಡಾ॥ಎಲ್.ಬಸವರಾಜು ಅವರು ಸರ್ವಜ್ಞನ ಅಂಕಿತವನ್ನು 'ಪರಮಾರ್ಥ' ಎಂಬುದಾಗಿ ಬಳಸಿ, ಆತನ ವಚನಗಳನ್ನು ಸಂಗ್ರಹಿ ಅದಕ್ಕೆ 'ಪರಮಾರ್ಥ' ಎಂಬ ಹೆಸರಿನಲ್ಲಿ ಪ್ರಕಟಿಸಿರುವುದು ಇನ್ನೊಂದು.

**ಪರಮಾರ್ಥ ಎಂಬ ಅಂಕಿತದ ವಿಚಾರ.**

1) 'ಪರಮಾರ್ಥ' ಎಂಬ ಅಂಕಿತವನ್ನು ಸರ್ವಜ್ಞನಿಗೆ ಕೊಡಲು, ಡಾ॥ ಬಸವರಾಜು ಅವರು ಕೊಡುವ ಆಧಾರಗಳು :

'ಪರಮಾರ್ಥ' ಗ್ರಂಥವನ್ನು ಆ ಹೆಸರಿಗೇ ಮಹತ್ವ ಕೊಟ್ಟಿರುವ ಹಿರಿಯ ಸಂಶೋದಕರಲ್ಲೊಬ್ಬರಾದ ಡಾ॥ ಎಲ್. ಬಸವರಾಜು ಅವರ ಮಾತುಗಳು; "ಸರ್ವಜ್ಞನ ವಚನಗಳ ಸುಧಾರಿತ ಪರಿಷ್ಕರಣವೊಂದನ್ನು ತರಬೇಕೆಂದು ನಾನು ಸಂಕಲ್ಪಿಸಿದೆ. ಅವರಿಗೆ ಇರುವ ಏಕೈಕ ಆಧಾರ, ಹತ್ತಾರು ಓಲೆಯ ಪ್ರತಿಗಳನ್ನೂ,

ಕಾಗದದ ಪ್ರತಿಗಳನ್ನೂ ಸಂಗ್ರಹಿಸಿದೆ. ಆ ಪ್ರತಿಗಳಲ್ಲಿ ವೆಂಕನೆಂಬುವನು ಕ್ರಿ.ಶ. ೭-೩-೧೬೩೬ ರಲ್ಲಿ ನಕಲು ಮಾಡಿಕೊಂಡಿದ್ದ ಒಂದು ಓಲೆಯ ಗ್ರಂಥ ದೊರೆತುದರಿಂದ ನನ್ನ ಸಂಪಾದನ ಕಾರ್ಯಕ್ಕೆ ವಿಶ್ವಾಸಾರ್ಹವಾದೊಂದು ಪ್ರಾಚೀನತಮ ಆಧಾರ ಲಭಿಸಿದಂತಾಯಿತು. ಅಲ್ಲಿನ ಕೆಲವು ಪ್ರತಿಗಳೂ ಲಭ್ಯವಾದುದು ನನ್ನ ಪುಣ್ಯವಷ್ಟೇ ಅಲ್ಲ, ಕನ್ನಡ ನಾಡಿನ ಪುಣ್ಯವೆಂದೇ ಹೇಳಬೇಕು.

"ಆ ಪ್ರಾಚೀನತಮ ಪ್ರತಿಯಲ್ಲಿ ಸಿಕ್ಕಿದ (೯೩೭ ವಚನ) ಅಷ್ಟನ್ನು ನಾನು ನಿಜವಚನಗಳೆಂದು ಗಣನೆ ಮಾಡಿದೆ. ಮತ್ತು ಅಲ್ಲಿ ಆ ವಚನಗಳನ್ನು ಇಡಿಯಾಗಿ 'ಪರಮಾರ್ಥ' ವೆಂದು ಕರೆದಿರುವುದನ್ನು ಗಮನಿಸಿ ಈ ಗ್ರಂಥಕ್ಕೆ 'ಪರಮಾರ್ಥ' ಎಂದೇ ಹೆಸರಿಟ್ಟೆ. ಇದು ಸರ್ವಜ್ಞನ ಕೃತಿ ಸಮಷ್ಟಿಗೆ ಅನ್ವಯಿಸುವ ಏಕೈಕ ನಾಮಧೇಯ."[16]

2) ಶ್ರೀ <u>ಬಸವರಾಜು ಅವರ ನಿರ್ಧಾರವನ್ನು ಪ್ರಶ್ನಿಸಲು ಉಳಿದ ವಿದ್ವಾಂಸರು ಎತ್ತುವ ಅನುಮಾನಗಳು:</u>

(1) ಇಲ್ಲಿ ವೆಂಕಟನಾಗಲಿ, ಅವನದೇ ಆದ ಸಂಪ್ರದಾಯಕ್ಕೆ ಸೇರಿದ ಪ್ರತಿಕಾರ (ಅವನ ಮೊಮ್ಮಗ 'ವೆಂಕ' ನಿರಬಹುದಲ್ಲ)*ನಾಗಲಿ 'ಪರಮಾರ್ಥ' ಅಂತ ಕರೆದಾಕ್ಷಣಕ್ಕೆ, ಬೇರೆ ಪ್ರತಿಗಳಲ್ಲಿ 'ಸರ್ವಜ್ಞ' ಎಂದಿರುವುದು ಸರಿಯಲ್ಲವೆಂದು ಸಮರ್ಥಿಸಲು ಆಧಾರವೇನೋ ನಮಗೆ ಅರ್ಥವಾಗುವುದಿಲ್ಲ. ಅಲ್ಲದೆ 'ಸರ್ವಜ್ಞ' 'ಪರಮಾರ್ಥ' ಈ ಎರಡರ ಅರ್ಥದಲ್ಲಿ ಏನೂ ವ್ಯತ್ಯಾಸವೆನ್ನುವುದೂ ತಿಳಿಯುವುದಿಲ್ಲ.

ಎರಡೂ ಎಲ್ಲ ಬಲ್ಲವನಾದ, ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆದ ಭಗವಂತನೆಂದೇ ತಾನೆ ಅರ್ಥವಾಗುವುದು?

---

*. ಲೇಖಕರ ಆಶಯವನ್ನು ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ, ಈ ಪ್ರತಿಕಾರ ಕೆಳದಿ ಲಿಂಗಣ್ಣ ಕವಿಯ ತಂದೆ ವೆಂಕ ಇಲ್ಲವೆ ಮಗ ವೆಂಕಣ್ಣ ಆಗಿರಬಹುದು. ಕಾಲದೃಷ್ಟಿಯಿಂದ ತಂದೆ ವೆಂಕನೇ ಇರಬಹುದು ಎನ್ನಬೇಕಾಗುತ್ತದೆ. ಕೆಳದಿ ಮ್ಯೂಸಿಯಮ್ಮಿನ ತಾಡ ಪತ್ರ ಗ್ರಂಥ ಸಂಗ್ರಹದಲ್ಲಿ ಸುಮಾರು 50 ಸರ್ವಜ್ಞನ ಪದ್ಯಗಳುಳ್ಳ ಒಂದೇ ಗರಿ ಸಿಕ್ಕಿದೆ. ಆದರೆ ಇದರಲ್ಲಿ ಯಾವ ಪದ್ಯದಲ್ಲೂ 'ಪರಮಾರ್ಥ' ಅಂಕಿತವಿಲ್ಲ. ಆದ್ದರಿಂದ, 'ಪರಮಾರ್ಥ' ಪದ್ಯ ಸಂಗ್ರಹದ ವೆಂಕ ಯಾರು, ಎಲ್ಲಿಯವನು, ಎನ್ನುವುದು ವಿಚಾರಣೀಯವಾಗಿಯೇ ಉಳಿಯುತ್ತದೆ. ಉತ್ತಂಗಿಯವರ ಸಂಗ್ರಹದಲ್ಲೂ ಕೆಲವು ಪದ್ಯಗಳಿಗೆ 'ಪರಮಾರ್ಥ' ಅಂಕಿತ ಇರುವುದು ಸೋಜಿಗದ ಸಂಗತಿ. ಈ ವಿಚಾರದಲ್ಲಿ ಇನ್ನೂ ಸಂಶೋಧನೆಗೆ ಅವಕಾಶ ಇದೆ. ಎಂಬುದು ಪಂಡಿತ ಕೆ.ಪಿ.ಶಿವಲಿಂಗಯ್ಯ ಅವರ ಅಭಿಪ್ರಾಯವಾಗಿದೆ.

(2) ಡಾ॥ ಎಲ್. ಬಸವರಾಜು ಅವರು ೧೦೦೨ ತ್ರಿಪದಿಗಳನ್ನುಳ್ಳ 'ಪರಮಾರ್ಥ' ಎಂಬ ಸರ್ವಜ್ಞ ವಚನಗಳ ಕೃತಿಯನ್ನು ಪರಿಷ್ಕರಿಸಿದ್ದಾರೆ. ಇದರ ಸಂಪಾದನೆಗೆ ದೊರೆತ ಹಸ್ತ ಪ್ರತಿಗಳ ಜತೆಗೆ ೧೬ ಅಚ್ಚಿನ ಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಕ್ರಿ. ಶ. ೧೬೩೬ ರಲ್ಲಿ ವೆಂಕ ಎಂಬುವವನು ನಕಲು ಮಾಡಿದ್ದ ಓಲೆ ಪ್ರತಿಯ ಆಧಾರದ ಮೇಲೆ ಇದುವರೆಗೆ ಬಳಸಲಾಗಿದ್ದ 'ಸರ್ವಜ್ಞ' ಎಂಬುದಕ್ಕೆ ಬದಲಾಗಿ 'ಪರಮಾರ್ಥ' ಎಂಬ ಹೆಸರನಿಟ್ಟಿದ್ದಾರೆ. ಇದರಿಂದ ಸರ್ವಜ್ಞನ ವಚನಗಳು 'ಪರಮಾರ್ಥ ವಚನಗಳಾದವು.' ಈ ಕಾಲ ನಮೂದಿತ ಹಸ್ತ ಪ್ರತಿಯಲ್ಲಿ ದೊರೆಯುವ ೯೩೭ ವಚನಗಳನ್ನು ನಿಜವಚನಗಳೆಂದು ಪರಿಗಣಿಸಲಾಗಿದೆ. ಇದಕ್ಕಿಂತ ಪ್ರಾಚೀನ ಹಸ್ತಪ್ರತಿಗಳು ದೊರೆತಿದ್ದರೂ ಅವಾವುದರಲ್ಲಿಯೂ ಪ್ರತಿಯ ಕಾಲ ನಮೂದಿತವಾಗಿರುವುದಿಲ್ಲ. ದೊರೆಯುವ ಎಲ್ಲಾ ಹಸ್ತ ಪ್ರತಿಗಳ ತುಲನಾತ್ಮಕ ದೃಷ್ಟಿಯಿಂದ ಪರಿಷ್ಕರಣ ಮಾಡಬೇಕಾದದು ಅತ್ಯಂತ ಸೂಕ್ತ ಮಾರ್ಗವಾಗಿದೆ. ಹಲವಾರು ಹಸ್ತಪ್ರತಿಗಳಲ್ಲಿರುವ 'ಸರ್ವಜ್ಞ' ಅಂಕಿತವನ್ನು ಬಿಟ್ಟು ಯಾವುದೋ ಒಂದು ಹಸ್ತಪ್ರತಿಯಲ್ಲಿರುವುದನ್ನು ಅಂಗೀಕರಿಸುವುದು ಸಮರ್ಥನೀಯವಾಗುವುದಿಲ್ಲ ಎಂಬುದು ಪ್ರಾಚೀನ ಕನ್ನಡ ಗಂಥಸಂಪಾದನೆ ಕೃತಿಯಲ್ಲಿ ಬಿ.ಎಸ್.ಸಣ್ಣಯ್ಯನವರ ಕೃತಿ ಅಭಿಮತ.

(3) 'ಸರ್ವಜ್ಞ' ಎಂಬುದು ಒಬ್ಬ ವ್ಯಕ್ತಿಯ ಹೆಸರಲ್ಲ; ಅದೊಂದು ಕಾವ್ಯ ಪದ್ಧತಿಗೆ ಇಟ್ಟ ಹೆಸರು. ಎಂದರೆ ಸರ್ವಜ್ಞನವುಗಳೆಂದು ನಾವು ಒಪ್ಪಿಕೊಂಡಿರುವ ಈ ತ್ರಿಪದಿಗಳಲ್ಲಿ ಎಷ್ಟನ್ನೊ ವಾಸ್ತವವಾಗಿ ರಚಿಸಿದ ಕವಿಯೊಬ್ಬ ಈ ಪದ್ಧತಿಯ ಮೂಲದಲ್ಲಿ ಇದ್ದಿರಲೆ ಇಲ್ಲವೆಂದು ಈ ಮಾತಿನ ಅರ್ಥವಲ್ಲ. ಖಂಡಿತ ಇದನ್ನು ಬರೆದ ವ್ಯಕ್ತಿಯೊಬ್ಬ ಇದ್ದಿರಬೇಕು. ಅವನ ಹೆಸರೇನೋ ತಿಳಿಯದು. 'ಸರ್ವಜ್ಞ' ಎಂಬುದೇ ಈ ತ್ರಿಪದಿಗಳಲ್ಲಿ ಎಷ್ಟನ್ನೊ ಬರೆದ ಕವಿಯ ಹೆಸರಿದ್ದಿರಬೇಕು–'ಪ್ರಭು' 'ಪ್ರಭುದೇವ' ಎಂಬ ಹೆಸರಿನಂತೆ, ಸರ್ವಜ್ಞ ಎಂಬುದೂ ಒಬ್ಬ ವ್ಯಕ್ತಿಯ ಹೆಸರಾಗಿದ್ದಿರಬೇಕು ಎನ್ನುತ್ತಾರೆ ಕೆಲವರು. ಸರ್ವಜ್ಞ – ಎಂದು ಯಾರಾದರೂ ಹೆಸರಿಟ್ಟುಕೊಂಡಾರೆಯೇ, ಬಹುತೇಕ ಅದು, ಒಂದು ಬಿರುದು ಅಥವಾ ಆತನ ಇಷ್ಟ ದೈವದ ಅಂಕಿತವಾಗಿರಬೇಕು, ಎನ್ನುತ್ತಾರೆ ಇನ್ನೂ ಕೆಲವರು.*

4. 'ಪರಮಾರ್ಥ'ದ ಹಸ್ತ ಪ್ರತಿಯನ್ನು ವೆಂಕನೆಂಬವನು ಕ್ರಿ.ಶ. 1636ರಲ್ಲಿ ಪ್ರತಿಮಾಡಿದನೆಂದು ತಿಳಿದುಬರುತ್ತದೆ. ಈ ವೆಂಕ ಯಾರು? " 'ವೆಂಕ' ಆತನ ನಿಜನಾಮಧೇಯವೇನಲ್ಲ" ಎಂದು ಎಚ್. ದೇವಿರಪ್ಪನವರು ಅದನ್ನು ನಿರಾಕರಿಸಿ, "ಕನ್ನಡದಲ್ಲಿ 'ವೆಂಕ ನಾಣಿ ಸೀನ' ಎಂದು ಅಪ್ರಸಿದ್ಧ ಅಗಣ್ಯ ಅನಾಮಿಕರನ್ನು ಸಂಬೋಧಿಸುವುದುಂಟು" ಎಂದು ಅಭಿಪ್ರಾಯ ಪಟ್ಟಿದ್ದಾರೆ. *[16]a

---

*. (16a 'ಜಂಗಮಜ್ಯೋತಿ', ಪು274)

'ಪರಮಾರ್ಥ' ಅಂಕಿತವುಳ್ಳ ಅಪೂರ್ವ ಹಸ್ತ ಪ್ರತಿಯೊಂದು ತಮಗೆ ಲಭ್ಯವಾದುದರಿಂದ ಅದೇ ಶೀರ್ಷಿಕೆಯಲ್ಲಿ ಸರ್ವಜ್ಞನ ವಚನಗಳನ್ನು ಸಂಪಾದಿಸಿ ಪ್ರಕಟಿಸಿದರು. ಡಾ॥ ಎಲ್. ಬಸವರಾಜು ಅವರು "ಆನೆ ನಡೆದುದೇ ಮಾರ್ಗ" ಎನ್ನುವಂತೆ ಇವರು ಏಕಾಂಗವೀರರಾಗಿ ಒಂದು ಸಂಸ್ಥೆಮಾಡುವಷ್ಟು ಕೆಲಸವನ್ನು ಈ ಕ್ಷೇತ್ರದಲ್ಲಿ ಮಾಡಿದ್ದಾರೆ. ಕನ್ನಡ ಸಂಶೋಧನಾಕ್ಷೇತ್ರಕ್ಕೆ ಇವರ ಕೊಡುಗೆ ಇಂಥ ಕೃತಿಗಳಿಂದ ಅಮೂಲ್ಯವೆನ್ನಿಸಿದೆ.

ಸರ್ವಜ್ಞನ ವಚನಗಳು 'ಸರ್ವಜ್ಞ' ಅಂಕಿತದೊಂದಿಗೇ ಹೆಚ್ಚು ಪ್ರಚಾರ ಪಡೆದುದರಿಂದ ಮತ್ತು 'ಪರಮಾರ್ಥ' ಅಂಕಿತಕ್ಕೆ ಬೇರೆ ವಿದ್ವಾಂಸರ ಸಮ್ಮತಿದೊರೆಯದ್ದರಿಂದ ಹಾಗೂ ಹೆಚ್ಚಿನ ಹಸ್ತಪ್ರತಿಗಳಲ್ಲಿ 'ಸರ್ವಜ್ಞ' ಅಂಕಿತವೇ ಇರುವುದರಿಂದ ಅವರು 'ಪರಮಾರ್ಥ' ಶೀರ್ಷಿಕೆಯನ್ನು ಮುಂದಿನ ಆವೃತ್ತಿಯಲ್ಲಿ ಕೈಬಿಟ್ಟು "ಸರ್ವಜ್ಞನ ವಚನಗಳು" ಶೀರ್ಷಿಕೆಯನ್ನು ಪ್ರಕಟಿಸಿದರು. ಇದು ಸಂಶೋಧಕನ ಶ್ರೇಷ್ಠ ಗುಣ ಹಾಗೂ ಪ್ರಾಮಾಣಿಕತೆಯಾಗಿದೆ. ತನ್ನದೇ ಸರಿ ಎಂಬ ಹಠ ಸಂಶೋಧಕನಿಗೆ ಇರಬಾರದು. ಅದಕ್ಕೆ ತಕ್ಕ ಪುಷ್ಟೀಕರಣ, ಸಾಕ್ಷ್ಯಾಧಾರ ಹಾಗೂ ದಾಖಲೆಗಳು ಅಷ್ಟಾಗಿ ಸಿಗದೇ ಹೋದಾಗ ಸಂಶೋಧಕ ತನ್ನ ಅಭಿಪ್ರಾಯವನ್ನು ಬದಲಿಸಿಕೊಳ್ಳಬೇಕು. ಇದು ಆರೋಗ್ಯಕಾರಿಯಾದುದು. ಎಲ್.ಬಸವರಾಜು ಅವರು ಇಂಥ ಆರೋಗ್ಯ ಮನಸ್ಸುಳ್ಳವರು.

ಸಂಪಾದನೆಯ ಸಿದ್ಧವೀರಣಾಚಾರ್ಯರು ಸೇರಿಸಿದ ಸರ್ವಜ್ಞ ತ್ರಿಪದಿಗಳು, ಪದ್ಯಗಳ ಸಂಖ್ಯೆ ೨೬೪. ಇವು ಸಾಧಾರಣವಾಗಿ ಸರ್ವಜ್ಞನ ಮೂರ್ತಿತ್ವವನ್ನು ಕುರಿತಿರುವ ಪದ್ಯಗಳೇ ಹೆಚ್ಚು. ಒಂದು ವೇಳೆ 1636ರ ಪ್ರತಿಯಲ್ಲಿನ 'ಪರಮಾರ್ಥ' ಎಂಬ ಅಂಕಿತಕ್ಕೆ ಪ್ರಾಚೀನತೆಯ ಬೆಂಬಲವುಂಟು ಎಂದು ಹೇಳಲಾಗಿದೆ.

---

*. ಡಾ॥ ಎಲ್. ಬಸವರಾಜು ಅವರು ಇತ್ತೀಚಿಗೆ (1972) ಸಂಪಾದಿಸಿ ಪ್ರಕಟಿಸಿರುವ ಸರ್ವಜ್ಞನ ವಚನ ಸಂಗ್ರಹದಲ್ಲಿ ಪ್ರತಿಯೊಂದು ತ್ರಿಪದಿಯಲ್ಲೂ, 'ಸರ್ವಜ್ಞ' ಎಂದಿರದೆ 'ಪರಮಾರ್ಥ' ಎಂದು ಕಾಣಿಸಿಕೊಳ್ಳುತ್ತದೆ. ಡಾ॥ ಬಸವರಾಜು ಅವರಿಗೆ ಆಧಾರವಾಗಿ ದೊರೆತ ಸರ್ವಜ್ಞನ ಅತ್ಯಂತ ಪ್ರಾಚೀನ ಪ್ರತಿ ಕ್ರಿ.ಶ. 7–3–1636 ರಲ್ಲಿ ವೆಂಕನೆಂಬುವನು ಮಾಡಿಕೊಂಡ ಓಲೆಯ ಪ್ರತಿಯಲ್ಲಿ ಪ್ರತಿ ಪದ್ಯದ ಅಂಕಿತ 'ಸರ್ವಜ್ಞ' ಎಂಬುದರ ಬದಲು 'ಪರಮಾರ್ಥ' ಎಂದಿರುವುದರಿಂದ, ಡಾ॥ ಬಸವರಾಜು ಅವರು "ಈ ಕೃತಿಯ ಹೆಸರು 'ಪರಮಾರ್ಥ'. ಇದನ್ನು ಪ್ರತಿಯಲ್ಲಿ ಪ್ರತಿ ಮಾಡಿಕೊಂಡ ತೇದಿ ಇರುವುದರಿಂದ ಅದನ್ನು ಪ್ರಬಲ ಆಧಾರವಾಗಿ ತೆಗೆದುಕೊಂಡು ಅದರಲ್ಲಿನ 'ಪರಮಾರ್ಥ' ಎಂಬ ಅಂಕಿತವೇ ಸಾಚಾ ಎಂದೂ ಡಾ॥ಬಸವರಾಜು ಭಾವಿಸಿದ್ದಾರೆ. ಆದರೆ ತೇದಿಯನ್ನು ಕಾರಣಾಂತರದಿಂದ ಹಾಕದೆ ಇರುವ ಪ್ರತಿಗಳು ಹಾಕಿದ ಒಂದೇ ಒಂದು ಪ್ರತಿಗಿಂತ ಯಾಕೆ ಪ್ರಾಚೀನವಾಗಿರಲು ಸಾಧ್ಯವಿಲ್ಲ ಎಂಬುದನ್ನು ಎಲ್ಲಾ ಪ್ರತಿಗಳಲ್ಲೂ 'ಸರ್ವಜ್ಞ' ಎಂದೇ ಅಂಕಿತವಿರುವಾಗ, ಒಂದೇ ಒಂದು ಪ್ರತಿಯಲ್ಲಿರುವ 'ಪರಮಾರ್ಥ' ಎಂಬ ಅಂಕಿತವೇ ವಿಶ್ವಾಸಾರ್ಹವಾಗಲು ಹೇಗೆ ಸಾಧ್ಯ – ಎಂಬುದನ್ನು, ಡಾ॥ ಬಸವರಾಜು ಅವರು ಯಾಕೆ ವಿಚಾರ ಮಾಡಲಿಲ್ಲ ಎಂಬುದು ಆಶ್ಚರ್ಯದ ಸಂಗತಿಯಾಗಿದೆ. ಎಂದು ಜಿ.ಎಸ್. ಶಿವರುದ್ರಪ್ಪನವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಆದರೆ ಜಿ.ಎಂ. ಉಮಾಪತಿಶಾಸ್ತ್ರಿ ಪ್ರಕಟಿಸಿರುವ ತ್ರಿಪದಿಗಳನ್ನು ವೆಂಕನ ಕಾಲದಲ್ಲೆ, ಆವನಿಗಿಂತ ಮುಂಚೆ ಅಥವಾ ಸ್ವಲ್ಪ ಈಚೆ ಇದ್ದಿರಬಹುದಾದ ಸಿದ್ಧವೀರಣಾಚಾರ್ಯರು (ಇವರ ಕಾಲ, ಸುಮಾರು 1600–1650) ಸಂಕಲಿಸಿದ, ಸಂಪಾದಿಸಿದ ತ್ರಿಪದಿಗಳಲ್ಲಿ "ಸರ್ವಜ್ಞ" ಎಂಬ ಅಂಕಿತ ದೊರೆಯುವುದರಿಂದ ಈ ಅಂಕಿತಗಳಿಗೂ ಪ್ರಾಚೀನತೆಯ ಬೆಂಬಲ ಸಮನಾಗಿದೆಯೆಂದು ಹೇಳಬಹುದು.

"ಸರ್ವಜ್ಞ ಎಂಬುದು ಎಲ್ಲವನ್ನೂ ತಿಳಿದ ಜ್ಞಾನಸ್ವರೂಪನಾದ ಭಗವಂತನನ್ನು ಮನಸ್ಸಿನಲ್ಲಿಟ್ಟುಕೊಂಡು ಉಪಯೋಗಿಸಿರುವ ಅಂಕಿತವಾಗಿ ಕಾಣುತ್ತದೆ." ಎಂಬ ಎ.ಆರ್.ಕೃಷ್ಣಶಾಸ್ತ್ರಿಗಳ ಮಾತು ಸೂಕ್ತವಾಗಿ ತೋರುತ್ತದೆ. ಸರ್ವಜ್ಞನ ಕಾವ್ಯ ಒಟ್ಟಿನಲ್ಲಿ ನೀತಿಕಾವ್ಯ. ರಸಿಕನಾದ ಕವಿಯ ಕೈಗೆಸಿಕ್ಕಿದರೆ ಕಸವೂ ರಸವಾಗುತ್ತದೆ. ರಸಿಕತೆಯೇ ಕವಿಯ ಜೀವನ, ಅದು ಸರ್ವಜ್ಞನಲ್ಲಿ ಬೇಕಾದಷ್ಟಿದೆ ಎಂದಿದ್ದಾರೆ.

ಕನ್ನಡದಲ್ಲಿ ಸರ್ವಜ್ಞನಿಗಿಂತಲೂ ಹಿಂದೆ ಇದ್ದ ವೀರಶೈವ ಮತ್ತು ಜೈನ ಕವಿಗಳೆಲ್ಲರೂ ಹೆಸರುಗಳನ್ನು ಅಂಕಿತವಾಗಿಟ್ಟುಕೊಂಡಿರುವುದು ಕಂಡುಬರುತ್ತದೆ. ಇದರಿಂದ ತಿಳಿಯುವುದೇನೆಂದರೆ ಅಂಕಿತ ಇಟ್ಟುಕೊಳ್ಳುವ ಪದ್ಧತಿಯು ಅತ್ಯಂತ ಪ್ರಾಚೀನವಾದದ್ದೆಂದು ಕಂಡುಬರುತ್ತದೆ. ಸರ್ವಜ್ಞನಿಗಿಂತಲೂ ಹಿಂದೆ ಇದ್ದ ವಚನಕಾರರು ತಮ್ಮ ವಚನಗಳಲ್ಲಿ ಅಂಕಿತವನ್ನು ಬಳಸಿದ್ದಾರೆ. ಅದು ಇಷ್ಟದೈವದ ಹೆಸರಾಗಿರಬಹುದು. ಉದಾ: (ಪಾಂಡುರಂಗ ವಿಠಲ, ಚನ್ನಮಲ್ಲಿಕಾರ್ಜುನ, ಕೂಡಲಸಂಗಮ ದೇವಾ, ಗುಹೇಶ್ವರ) ಅಥವಾ ತಮಗೆ ಪ್ರಿಯರಾದ ಅಥವಾ ತನ್ನದೇ ಹೆಸರನ್ನು ಅಂಕಿತವಾಗಿ ಬಳಸಿದ್ದಾರೆ. ಈ ಎಲ್ಲವೂ ವ್ಯಕ್ತಿಯ ಸೂಚಕಗಳಾಗಿವೆ. 'ಪರಮಾರ್ಥ' ಎಂಬುದು ಒಂದು ಅಮೂರ್ತ ಕಲ್ಪನೆಯ ತತ್ವವಾಗಿದೆ. ಹೀಗೆ ತತ್ವದ ಹೆಸರನ್ನು ಅಂಕಿತವಾಗಿ ಬಳಸುವುದು ರೂಢಿಯಲ್ಲಾದುದರಿಂದ 'ಸರ್ವಜ್ಞ' ಎಂಬುದೇ ನಿಜವಾದ ಅಂಕಿತವಾಗಿದೆ.

ಮೇಲಿನ ಕೆಲವು ಅಂಶಗಳನ್ನು ನಿರೂಪಿಸುವ ಉದಾಹರಣೆಗಳನ್ನು ನಾವು ಅಧ್ಯಯನ ಮಾಡಬೇಕಾಗುತ್ತದೆ. ಏಕೆಂದರೆ ಸರ್ವಜ್ಞನ ಎಲ್ಲಾ ವಚನಗಳಿಗೆ ಯಾವುದೇ ಹೆಸರನ್ನು ಸೇರಿಸಿದರೂ ಆ ಹೆಸರು ಆ ವಚನಕ್ಕೆ ಹೊಂದಿಕೊಳ್ಳುತ್ತದೆ, ಇದಕ್ಕೆ ಕಾರಣ ಅವುಗಳು ಒಂದು ರೀತಿಯ ಹೇಳಿಕೆಗಳಾಗಿವೆ ಎಂಬುದಾಗಿದೆ.

ಯಾತಾರ ಹೂವದು ನಾತರ ಸಾಲದೆ

ಜಾತಿ ವಿಜಾತಿಯೆನ ಬೇಡ ಶಿವನೊಲಿ

ದಾತನೇ ಜಾತ—————

ಈ ಮೇಲಿನ ವಚನದಲ್ಲಿ ಖಾಲಿ ಇರುವ ಜಾಗಕ್ಕೆ ಯಾವ ಅಂಕಿತವನ್ನಾದರೂ ಹೊದಿಕೊಳ್ಳುವಂತಿದೆ. ಏಕೆಂದರೆ ಇದು ಒಂದು ಹೇಳಿಕೆಯ ರೂಪದಲ್ಲಿದೆ. ಈ ಹೇಳಿಕೆಗಳಿಗೆ 'ಪರಮಾರ್ಥ' ಎಂಬ ಅಂಕಿತ ಹೊಂದುವುದಿಲ್ಲ.

ಶ್ವಾನ ತೆಂಗಿನಕಾಯಿ ತಾನು ಮೆಲ್ಲ ಬಲ್ಲದೇ

ಜ್ಞಾನವಿಲ್ಲದಗೆ ಉಪದೇಶವಿತ್ತಡೆ

ಹಾನಿ ಕಂಡಯ್ಯ—————

ಮೇಲಿನ ವಚನದಲ್ಲಿಯೂ 'ಸರ್ವಜ್ಞ' ಎಂಬುದು ಮಾತ್ರ ಸಾಧ್ಯವಾಗುತ್ತದೆ. ಇವೆಲ್ಲಾ ಸಂಬೋಧಕ ರೂಪಗಳಿಗೆ ಆಗಿದ್ದ 'ಪರಮಾರ್ಥ' ಎಂಬುದು ರಚನೆಯ ದೃಷ್ಟಿಯಿಂದ ಹೊಂದಿಕೊಳ್ಳುವುದಿಲ್ಲ. ಸರ್ವಜ್ಞ ಎಂಬುದೇ ಸಹಜ ಅಂಕಿತವಾಗಿದ್ದು, ಸರ್ವಜ್ಞ ಬಳಸಿದ್ದು ಅದನ್ನೇ. ಯಾವುದೇ ಒಂದು ಹಸ್ತ ಪ್ರತಿಯಲ್ಲಿ ದೊರಕಿದ ವಚನಗಳನ್ನು ಆಧಾರವಾಗಿಟ್ಟು ಕೊಂಡು 'ಪರಮಾರ್ಥ' ಎಂದು ಹೇಳುವುದು ತಪ್ಪಾಗುತ್ತದೆ.

******

# ಅಡಿಟಿಪ್ಪಣಿಗಳು

1) ಜಿ.ಎಸ್. ಶಿವರುದ್ರಪ್ಪ : (ಲೇಖನ) 'ಕವಿ ಸರ್ವಜ್ಞ', ಪುಟ – 139
[ಪುಸ್ತಕ –ವಿಮರ್ಶೆಯದಾರಿ]

2) ಕಿರಿಯರ ವಿಶ್ವಕೋಶ : ಜ್ಞಾನ ಗಂಗೋತ್ರಿ, ಪುಟ – 5

3) ಜಿ.ಎಸ್. ಶಿವರುದ್ರಪ್ಪ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, (ಭಾಗ–5) ಪುಟ – 57

4) ಎ.ಆರ್. ಕೃಷ್ಣಶಾಸ್ತ್ರಿ : ಸರ್ವಜ್ಞ ಕವಿ, ಪುಟ – 12

5) ಜಿ.ಎಸ್. ಶಿವರುದ್ರಪ್ಪ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, (ಭಾಗ–5) ಪುಟ – 59

6) ಜಿ.ಎಸ್. ಶಿವರುದ್ರಪ್ಪ : (ಲೇಖನ) 'ಕವಿ ಸರ್ವಜ್ಞ', ಪುಟ – 144

7) ಜಿ.ಎಂ. ಉಮಾಪತಿಶಾಸ್ತ್ರಿ(ಸ) : ಸರ್ವಜ್ಞ ಮೂರ್ತಿಯ ವಚನಗಳು (1973) ಪುಟ – 8

8) ಜಿ.ಎಸ್. ಶಿವರುದ್ರಪ್ಪ : (ಲೇಖನ) 'ಕವಿ ಸರ್ವಜ್ಞ', ಪುಟ – 138
[ಪುಸ್ತಕ –ವಿಮರ್ಶೆಯದಾರಿ]

9) ಬಿ. ಮಹಾದೇವಪ್ರಸಾದ : ಅರಿವು ಆಚಾರ, ಪುಟ – 420

10) ಎಂ. ಮರಿಯಪ್ಪಭಟ್ಟರು(ಸ): ಸರ್ವಜ್ಞ ವಚನ ಸಂಗ್ರಹ. ಪುಟ – 30

11) ಅಲ್ಬರ್ಟ್.ಬಿ ಲಾರ್ಡ್ : ದಿ ಸಿಂಗರ್ ಆಫ್ ಟೇಲ್ಸ್: ನ್ಯೂಯಾರ್ಕ್(1965) ಪುಟ – 3

12) ಕನ್ನಡ ಅಧ್ಯಯನ ಪೀಠ : ಜಾನಪದ ಸಾಹಿತ್ಯದರ್ಶನ (ಭಾಗ–5) ಪುಟ – 15

13) ಸ.ಸ. ಮಾಳವಾಡ : ಸಾಹಿತ್ಯ ಸಂಗಮ ಪುಟ – 190

14) ಎಸ್. ವಿ. ರಂಗಣ್ಣ : 'ಶೈಲಿ' ಪುಟ – 434

15) ಚನ್ನಪ್ಪ ಉತ್ತಂಗಿ : ಸರ್ವಜ್ಞನ ವಚನಗಳು (1934) ಪುಟ – 5

16) ಡಾ॥ ಎಲ್. ಬಸವರಾಜು : 'ಪರಮಾರ್ಥ' ಪುಟ – 10

17) ಡಾ॥ ಜಿ.ಎಸ್. ಶಿವರುದ್ರಪ್ಪ : (ಲೇಖನ) 'ಕವಿ ಸರ್ವಜ್ಞ', ಪುಟ – 137
[ಪುಸ್ತಕ –ವಿಮರ್ಶೆಯದಾರಿ]

# ಅಧ್ಯಾಯ – ನಾಲ್ಕು

# ಸರ್ವಜ್ಞ ವಚನಗಳ ಸಂಪಾದನಾ ಕಾರ್ಯಕ್ಕೆ ಶ್ರಮಿಸಿರುವ ಮಹನೀಯರು

'ಕವಿ ಸರ್ವಜ್ಞ 'ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಎಲ್ಲರಿಗೂ ಚಿರಪರಿಚಿತನಾದವನು. ತ್ರಿಪದಿ ಛಂದಸ್ಸಿನಲ್ಲಿ ರಚಿತವಾದ ಹಲವಾರು ಕನ್ನಡ ಕೃತಿಗಳಲ್ಲಿ ಹಿರಿಯ ಸ್ಥಾನವನ್ನು ಪಡೆದ ಒಂದು ಗ್ರಂಥವೆಂದರೆ "ಸರ್ವಜ್ಞನ ವಚನಗಳು". ಇದರ ಹಲವಾರು ಆವೃತ್ತಿಗಳು ವಿವಿಧ ಸಂಪಾದಕರಿಂದ, ಪ್ರಕಾಶಕರಿಂದ ಭಿನ್ನ ಭಿನ್ನ ರೀತಿಯಲ್ಲಿ ಪ್ರಕಾಶಿತವಾಗಿರುವುದುಂಟು. ಸರ್ವಜ್ಞ ಕವಿಯ ಪರಿಚಯದೊಂದಿಗೆ, ಆತನ ವಚನಗಳ ಸಂಪಾದನಾಕಾರ್ಯಕ್ಕೆ ಅಗಣಿತವಾಗಿ ಸೇವೆ ಸಲ್ಲಿಸಿರುವ ಮತ್ತು ಶ್ರಮಿಸಿರುವ ಮಹಾನ್ ವ್ಯಕ್ತಿಗಳ ಕೊಡುಗೆ ಅದ್ವಿತೀಯವಾದದ್ದು. ಈತನ ತ್ರಿಪದಿಗಳನ್ನು ಸಂಗ್ರಹಿಸಿ, ಸಂಪಾದಿಸಿರುವ ಕ್ರಮವನ್ನು ಸಂಪಾದನಾಕಾರರ ಕೃತಿಗಳ ಮೂಲಕ ತಿಳಿಯಲು ಪ್ರಯತ್ನಿಸುವಂತಹದ್ದು ಕೂಡ ಗಮನಾರ್ಹ ಕಾರ್ಯವಾಗಿದೆ. ಗ್ರಂಥ ಸಂಪಾದನಾ ಶಾಸ್ತ್ರದ ದೃಷ್ಟಿಯಿಂದ ಸರ್ವಜ್ಞನ ತ್ರಿಪದಿಗಳನ್ನು ಸಂಪಾದಿಸಿರುವ ಕಾರ್ಯದಲ್ಲಿ ರೆವರೆಂಡ್. ಎಫ್.ಕಿಟಲ್, ಚೆನ್ನಪ್ಪ ಉತ್ತಂಗಿ, ಡಾ॥ ಎಲ್. ಬಸವರಾಜು ಪ್ರೊ॥ ಎಂ.ವಿ. ಸೀತಾರಾಮಯ್ಯ ಮೊದಲಾದವರು ಪ್ರಮುಖವಾಗಿ ಶ್ರಮಿಸಿರುವ ಮಹನೀಯರೆನಿಸಿದ್ದಾರೆ. ಇವರುಗಳು ನಡೆಸಿದ ಪ್ರಯತ್ನಗಳಿಂದ ಸರ್ವಜ್ಞ ಇಂದಿಗೂ ಉಳಿದುಕೊಂಡು ಬಂದಿದ್ದಾನೆ.

## 1. ರೆವೆರೆಂಡ್. ಎಫ್. ಕಿಟಲ್



ರೆ. ಫರ್ಡಿನೆಂಡ್. ಕಿಟ್ಟೆಲ್

ಕಿಟೆಲ್‌ರು ಜರ್ಮನಿಯ ರಾಸ್ಟರ್ ಹಾಫ್ ಎಂಬಲ್ಲಿ 7ನೇ ಎಪ್ರೀಲ್ ಕ್ರಿ. ಶ. 1832 ರಂದು ಜನಿಸಿದರು. ಬಾಸೆಲ್ ಮಿಶನ್ ವತಿಯಿಂದ ನಮ್ಮ ನಾಡಿಗೆ ಬಂದವರು.

ಸುಮಾರು ನಾಲ್ಕು ದಶಕಗಳಷ್ಟು ಕಾಲ ಈ ನಾಡಿನಲ್ಲಿದ್ದು, ಮತ ಪ್ರಸಾರಕ್ಕಿಂತ

ಹೆಚ್ಚಾಗಿ ಕನ್ನಡದ ಕೆಲಸವನ್ನು ಮಾಡಿದರು. ಗ್ರಂಥ ಸಂಪಾದನೆಯ ಇತಿಹಾಸದಲ್ಲಿ ಅಗ್ರಪೂಜೆ ಸಲ್ಲಬೇಕಾದದ್ದು ಫರ್ಡಿನೆಂಡ್ ಕಿಟೆಲ್‌ರಿಗೆ. ತಮ್ಮ ವೈಶಿಷ್ಟಪೂರ್ಣ, ಅಪೂರ್ವ ನಿಘಂಟಿನಿಂದಾಗಿ ಅಮರರಾಗಿದ್ದರೆ. ಕನ್ನಡ ಜನತೆಯ ಮನಮಂದಿರಗಳಲ್ಲಿ ಚಿರಂತನರಾಗಿ ಉಳಿದವರು ಫರ್ಡಿನೆಂಡ್ ಕಿಟೆಲ್. ರೆ. ಫರ್ಡಿನೆಂಡ್ ಕಿಟೆಲ್ ಅವರಂತಹ ಬಹುಶ್ರುತ ಕನ್ನಡ ವಿದ್ವಾಂಸರು ದೇಶಿಯ ಹಾಗೂ ವಿದೇಶಿಯರಲ್ಲಿ ಅಪರೂಪ.

ಕನ್ನಡ ಸಂಶೋಧಕರೂ, ಉದ್ಧಾಮಪಂಡಿತರು ಆಗಿದ್ದ ರೆ. ಫರ್ಡಿನೆಂಡ್ ಕಿಟೆಲ್ ಅವರು ಸಾಹಿತ್ಯ ಲೋಕದಲ್ಲಿ ಚಿರಸ್ಮರಣೀಯರಾಗಿದ್ದಾರೆ. ಇವರು ಕನ್ನಡದ ಆಳವಾದ ಅಭ್ಯಾಸ, ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಅಧ್ಯಯನ ನಡೆಸಿದವರು. ಕನ್ನಡ ನಾಡಿನ ಚರಿತ್ರೆಯ, ಸಾಹಿತ್ಯ – ಸಂಸ್ಕೃತಿಗಳ ಕ್ಷೇತ್ರದಲ್ಲಿಯೂ ಕಿಟಲ್‌ರು ಮಾಡಿರುವ ಸೇವೆ ಅಮೋಘವಾದದ್ದು. ತಮ್ಮ ಜೀವಮಾನದ ಕೊನೆಯ ದಿವಸದವರೆಗೂ ಕನ್ನಡಕ್ಕಾಗಿ ದುಡಿದು ಕನ್ನಡದ ವಿದ್ವತ್ತಿಗೆ ಭದ್ರವಾದ ತಳಹದಿಯನ್ನು ಹಾಕಿದರು. ಶಾಸ್ತ್ರೀಯವಾಗಿ ಮಾರ್ಗದಲ್ಲಿ ಕನ್ನಡ ವಿದ್ವತ್ತು ಬೆಳೆಯುವುದಕ್ಕೆ ಶ್ರಮಿಸಿದರು.

## ಸರ್ವಜ್ಞನ ವಚನಗಳ ಸೇವೆಯಲ್ಲಿ ರೆ. ಫರ್ಡಿನೆಂಡ್ ಕಿಟೆಲ್

ಸರ್ವಜ್ಞನು ಜೀವಂತವಿರುವಾಗ ಬರೆಯಲ್ಪಟ್ಟ ಓಲೆಯ ಪ್ರತಿಗಳಂತೂ ದೊರೆಯುವಂತಿಲ್ಲ. ಇವನ ಮೂಲ ಪ್ರತಿಗಳ ವಿಚಾರಕ್ಕೆ ಮೊದಲು ಮಾಡಿದವರು ರೆವರೆಂಡ್ ಎಫ್. ಕಿಟೆಲ್ ಪಂಡಿತರಿಗೆ ಎರಡು ಕೈ ಬರಹದ ಪ್ರತಿಗಳು ದೊರೆತಿದ್ದಂತೆ ಅವರು ನಾಗವರ್ಮನ  ಛಂದೋಂಬುಧಿಗೆ ಬರೆದ ವಾಙ್ಮಯ ನಿಬಂಧದಿಂದ ತಿಳಿಯುತ್ತದೆ.

"ಪ್ರಾಕಾವ್ಯಮಾಲಿಕೆ" ಎಂಬ ಗ್ರಂಥವನ್ನು ಕೈಬರಹದ ಎರಡು ಪ್ರತಿಗಳನ್ನೂ ಆಧಾರ ಮಾಡಿಕೊಂಡು ಬಾಸೆಲ್ ಮಿಶ್‌ನ್ನಿನ ಪಂಡಿತ. ರೆ. ಫರ್ಡಿನೆಂಡ್ ಕಿಟೆಲ್ ಮತ್ತು ಇನ್ನೊಬ್ಬ ಮಿಶನರಿಯವರು ರಚಿಸಿದ "ಕರ್ನಾಟಕ ಕಾವ್ಯ ಮಾಲೆ " ೧೮೭೪ ಎಂಬ ಗ್ರಂಥದಲ್ಲಿ ಪುಟ ೧೮, – ೨೪೩ ರ ವರೆಗೆ ಅಲ್ಲಲ್ಲಿ ಕೆಲವು ಪದ್ಯಗಳು ದೊರೆಯುವವು. ಕಿಟೆಲ್ ಪಂಡಿತರು ರಚಿಸಿದ ಪ್ರಸಿದ್ಧ "ಕನ್ನಡ – ಇಂಗ್ಲೀಷ್ ನಿಘಂಟಿ" ನಲ್ಲಿ ದೊರೆಯುವ ಪದ್ಯಗಳು ಸುಮಾರು ೨೫೦. ೧೮೯೪ ರಲ್ಲಿ ಅದೇ ಬಾಸೆಲ್ ಮಿಶನ್ನಿನವರಿಂದ ಅಚ್ಚಾಗಿದೆ. ಇವರು ಇವುಗಳಲ್ಲಿ ಹಳಗನ್ನಡದ'ಱ ೞ' ಎಂಬ ಅಕ್ಷರಗಳನ್ನು ಲಕ್ಷಿಸಿ ಬರೆದಿರುವುದಲ್ಲದೆ. ಅಲ್ಲಲ್ಲಿ ಆವರಣದಲ್ಲಿ ಕೆಲವು ಅರ್ಥಸೂಚಕ ಶಬ್ದಗಳನ್ನು ಸೇರಿಸಿರುವರು.

ಕಿಟೆಲ್‌ರವರು ಸರ್ವಜ್ಞನ ವಚನಗಳಲ್ಲಿ ಅನೇಕವನ್ನು ಶಬ್ದಾರ್ಥ ನಿರ್ಣಯ ಸಂದರ್ಭಕ್ಕೆ ಉದಾಹರಣೆಗಳಲ್ಲಿ ಬಳಸಿಕೊಂಡಿದ್ದಾರೆ. ಇವರು ಏಕ ಪ್ರಕಾರವಾಗಿ ಸರ್ವಜ್ಞನ ವಚನಗಳಲ್ಲಿ ಹಳಗನ್ನಡದ 'ಱ' ಕಾರವನ್ನೂ 'ೞ' ಕಾರವನ್ನು ಪ್ರಯೋಗಿಸಿದ್ದಾರೆ. ಸರ್ವಜ್ಞನ ವಚನಗಳ ಹಸ್ತಪ್ರತಿಗಳಲ್ಲೇನೋ 'ೞ' ಕಾರ ಪ್ರಯೋಗವಿದೆ. 'ಱ' ಕಾರವನ್ನು ಕಿಟೆಲ್‌ರವರು ಸರ್ವಜ್ಞನ ಭಾಷಾಶೈಲಿಗೆ ಜೋಡಿಸಿದ್ದಾರೆ.

## ಕಿಟೆಲ್ ಕೋಶದ ಸರ್ವಜ್ಞನ ವಚನಗಳು

ರೆ. ಫರ್ಡಿನೆಂಡ್ ಕಿಟೆಲ್ ತಮ್ಮ ನಿಘಂಟಿನಲ್ಲಿ ಉಲ್ಲೇಖಮಾಡಿದ ಸರ್ವಜ್ಞನ ವಚನಗಳನ್ನೂ ಉಪಯೋಗಿಸಿಕೊಂಡು ಕೆಳದಿ ಮ್ಯೂಸಿಯಂನಲ್ಲಿ ದೊರೆತ ಸರ್ವಜ್ಞನ ತ್ರಿಪದಿಗಳ ಹಸ್ತಪ್ರತಿಯೊಂದನ್ನು ಆಧಾರವಾಗಿಟ್ಟುಕೊಂಡು ಪ್ರೊ. ಎಂ. ವಿ. ಸೀತಾರಾಮಯ್ಯನವರು ಸರ್ವಜ್ಞನ ವಚನಗಳನ್ನು ಸಂಪಾದಿಸಿದ್ದಾರೆ. ಅವರು ಪ್ರಸ್ತಾವನೆಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ.

"ಪ್ರಸ್ತುತ ಕಿಟೆಲ್ ಕೋಶದ ಪದ್ಯಗಳನ್ನು ಸಂಗ್ರಹಿಸುವ ಉದ್ದೇಶ, ಆತನು ಪಾಠ ಪರಿಷ್ಕರಣಕ್ಕೆ ಬಹುಶಃ ಕೈ ಹಾಕದೆ ತನಗೆ ದೊರೆತ ಇಲ್ಲವೆ ತಾನು ಪಡೆದುಕೊಂಡ ಒಂದು ಹಸ್ತಪ್ರತಿಯಲ್ಲಿಯ (ಹಾಗೂ ವಿರ್ತನ ಮುದ್ರಿತ ಪ್ರತಿಯ) ಪಾಠವನ್ನು ಅನುಸರಿಸಿರುವುದರಿಂದ ಕೋಶದ ಪದ್ಯಸಂಗ್ರಹಕ್ಕೆ ಒಂದು ಹಸ್ತ ಪ್ರತಿಯ ಬೆಲೆ ಉಂಟು ಎಂಬುದನ್ನು ವಿದ್ವಾಂಸರ, ಸರ್ವಜ್ಞ ಪಾಠ ಪರಿಷ್ಕರಣಾಸಕ್ತದ ಗಮನಕ್ಕೆ ತರುವುದು. ವಿರ್ತ್ ಸಂಗ್ರಹದ ಪಾಠಕ್ಕೂ, ಕಿಟೆಲ್ ಕೋಶದ ಪದ್ಯಗಳ ಪಾಠಕ್ಕೂ ಹೋಲಿಕೆಯಿದೆ. ಇವರಿಬ್ಬರಿಗೂ ಮೂಲವಾದ ಒಂದು ಪಾಠ ಇದ್ದಂತಿದೆ. ಕೆಳದಿ ಮ್ಯೂಸಿಯಮ್ಮಿನ ಹಸ್ತಪ್ರತಿಯ ಪದ್ಯಗಳ ಪಾಠಗಳಲ್ಲಿಯ ಪಾಠಾಂತರಗಳನ್ನು ಗಮನಿಸಿ, ಸರ್ವಪಾಠ ಸಮನ್ವಿತವೂ ಮೂಲಪಾಠಕ್ಕೆ ಸಮೀಪತಮವಾದದ್ದೂ ಆದ 'ಸರ್ವಜ್ಞ ಪಾಠ' ವನ್ನು ನಿರ್ಣಯಿಸಬೇಕಾದ ಕೆಲಸ ಆಗಬೇಕಾಗಿದೆ."[1]

ನಿಘಂಟುರಚನೆಗೆ ಶುದ್ಧಪಾಠ ಸ್ವೀಕಾರ ಅಗತ್ಯ ಎಂದು ಕಿಟೆಲ್ ಅವರು ಸರ್ವಜ್ಞನ ವಚನಗಳ ಎಲ್ಲ ಹಸ್ತಪ್ರತಿಗಳನ್ನು ಪಾಠ ವಿಮರ್ಶಕನ ದೃಷ್ಟಿಯಿಂದ ಪರಿಸಿಲಿಸಿ, ಮೂಲಪಾಠವನ್ನು ಗುರುತಿಸಿ ಆದರಿಂದ ತಮ್ಮ ನಿಘಂಟುವಿನ ನಿರ್ಮಾಣಕ್ಕೆ ಪದಪ್ರಯೋಗಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ ಎಂದು ಹೇಳಲಾಗದು. ಕಿಟೆಲ್ ಅವರು ವಿರ್ತ್‌ನ ಮುದ್ರಿತ ಪಾಟವನ್ನು ಬಲುಮಟ್ಟಿಗೆ ಅವಲಂಬಿಸಿದ್ದರೂ, ಕೋಶದ ಕೆಲವು ಪದ್ಯಗಳಲ್ಲಿ ಭಿನ್ನ ಪಾಠಗಳೂ ಇರುವುದರಿಂದ ಅವರು ಬೇರೊಂದು ಪೂರ್ವ ಮುದ್ರಣವನ್ನು ಇಲ್ಲವೆ ಹಸ್ತಪ್ರತಿಯನ್ನು ಪರಿಶೀಲಿಸಿರುವ ಸಾಧ್ಯತೆ ಉಂಟು. ಹೀಗಿರುವುದರಿಂದ,

ಸರ್ವಜ್ಞನ ಎಲ್ಲ ಹಸ್ತಪ್ರತಿಗಳ ಪಾಠಗಳಲ್ಲಿಯ ಪದಪ್ರಯೋಗಗಳ ನಿಘಂಟುವಿನಲ್ಲಿ ಪ್ರವೇಶ ಪಡೆದಿವೆ ಎಂದಾಗಲಿ ಕಿಟೆಲ್ ಸ್ವಿಕರಿಸಿದ ಪದಪ್ರಯೋಗ ಎಲ್ಲ ಸಂದರ್ಭಗಳಲ್ಲಿ ಸರ್ವಜ್ಞನದು ಎಂದು ಹೇಳುವುದು ಸಾಧ್ಯವಿಲ್ಲ. ಕಿಟೆಲ್ ಅವರು ನಿಘಂಟುವನ್ನು ರಚಿಸುವ ಕಾಲಕ್ಕೆ ಸರ್ವಜ್ಞನ ವಚನಗಳ ಸರ್ವಪಾಠ ಸಾಮಗ್ರಿ ಇನ್ನು ಸಿದ್ಧವಾಗಿರಲಿಲ್ಲ. ಈ ಪರಸ್ಥಿತಿಯಲ್ಲಿ ಅವರು ತಮಗೆ ದೊರೆತ ಸರ್ವಜ್ಞ ವಚನಗಳ ಒಂದೋ ಎರಡೋ ಸಂಗ್ರಹಗಳನ್ನು ಪ್ರಯೋಗಾಕರಗಳಾಗಿ ಸ್ವೀಕರಿಸಿದ್ದೆ ಮಹತ್ವದ ವಿಷಯ". [2]

೧. ಉತ್ತಂಗಿಯವರು 'ಪರಮಾರ್ಥ'ದ ಹಸ್ತಪ್ರತಿಯನ್ನು ಗಮನಿಸಿದ್ದಾರೆ. ಅದನ್ನು ಎಷ್ಟರಮಟ್ಟಿಗೆ ಬಳಸಿಕೊಂಡಿದ್ದಾರೆ ಎಂದು ಹೇಳುವುದೂ ಸಾಧ್ಯವಿಲ್ಲ. ಕಿಟೆಲ್‌ಕೋಶಕ್ಕೆ ಮೂಲವಾದ ಹಸ್ತಪ್ರತಿಯನ್ನು ಬಳಸಿಕೊಂಡಿರಬಹುದು. ಕಿಟೆಲ್ ಕೋಶವು ಪ್ರಕಟ ಆದದ್ದು ೧೮೯೪ ರಲ್ಲಿ. ಉತ್ತಂಗಿಯವರ ಪ್ರಥಮ ಮುದ್ರಣ ೧೯೨೩ರಲ್ಲಿ ಹೊರಬಂದಿತು.

೨. ಕಿಟಲ್ ಕೋಶದ ಆಕರ ಗ್ರಂಥಗಳ ಪಟ್ಟಿಯಲ್ಲಿ 'ಸರ್ವಜ್ಞನ ಪದ' (ರಗಳೆಯಲ್ಲಿರುವದು, ಸು. ಕ್ರಿ. ಶ. ೧೮೦೦) ಎಂದು ತಿಳಿಸಿದೆ. 'ಸರ್ವಜ್ಞ' ಪದಕ್ಕೆ ಸಂಬಂದಪಟ್ಟಂತೆ ಅದರಲ್ಲಿರುವ ಎಲ್ಲ ಪದ್ಯಗಳನ್ನು ಕೋಶದಲ್ಲಿ ಸೇರಿಸಿಲ್ಲ ಎಂದು ಸ್ಪಷ್ಟಪಡಿಸಲಾಗಿದೆ.

ಕಿಟೆಲ್ ಸರ್ವಜ್ಞ ವಚನಗಳನ್ನು ಇಡಿಯಾಗಿ ಉದ್ಧರಿಸಿಕೊಟ್ಟಿರುವುದಲ್ಲದೆ. ಅಲ್ಲಲ್ಲಿ ಪದ್ಯ ಭಾಗಗಳನ್ನೂ ಉದ್ಧರಿಸಿದ್ದಾರೆ. ನಮ್ಮ ಕಣ್ಣಿಗೆ ಬಿದ್ದ ಅಂತ ಹಲಕೆಲವು ಸಾಲುಗಳನ್ನು ಎತ್ತಿ ಕೊಡಲಾಗಿದೆ. ಸಾಧ್ಯವಿದ್ದ ಕಡೆ 'ಉ' ಮತ್ತು 'ಪ' ಮುದ್ರಣಗಳ ನೆರವಿನಿಂದ ಪದ್ಯದ ಉಳಿಕೆಯ ಭಾಗವನ್ನು ಪೂರ್ತಿಮಾಡಲು ಪ್ರಯತ್ನಿಸಿದೆ; ಅದನ್ನು ಚೌಕಕಂಸದಲ್ಲಿ ಕಾಣಿಸಿದ್ದಾರೆ.

ಉದಾ: ೧. [೧] ಅಟ್ಟಡಿಗೆ ರುಚಿಯನ್ನು ಹುಟ್ಟು ತಾ [೧] ಬಲ್ಲದೆ
[ಶ್ರೇಷ್ಠರುಗಳೆಂದು ಎನಬೇಡ । ಅರುಹಿನ
ಬಟ್ಟೆ ಬೇರೆಂದ ಸರ್ವಜ್ಞ]

೧. ಅಟ್ಟ ಪಾಕದ ರುಚಿಯ ಸಟ್ಟುಗ – ಪ. ೩೩೮. [ಅಡಿಗೆ. ೩೫]

ಉತ್ತಂಗಿ : ೪೨೦

೨. ನೀರ [೧] ಬೊಬ್ಬುಳಿ [೧] ನೆಚ್ಚಿ ಸಾರಿ ಕೆಡದಿರು ಮರುಳೆ
[ಸಾರಗುಣೀಯಾಗು, ನಿಜವತಿಳಿ, ಸರುವರೊಳು
[೨] ಕಾರಣಿಕ [೨] ನಾಗು ಸರ್ವಜ್ಞ]

೧. ಬೊಂಬೆಯ ( ಪ. ೨೬೧)

೨. ಕಾರುಣಿಕ (ಪ) [ನೀರ್ ೮೮೯]

ಉತ್ತಂಗಿ: ೧೫೦

ಕಿಟೆಲ್ ಕೋಶದ ಪದ್ಯಗಳನ್ನು ಛಂದಸ್ಸಿನ ದೃಷ್ಟಿಯಿಂದ ಪರಿಷ್ಕರಿಸಿರುವ ಮಾದರಿಯಲ್ಲಿಯೇ ಕೆಳದಿ ಮ್ಯೂಸಿಯಂನ ಹಸ್ತಪ್ರತಿಯ ಪದ್ಯಗಳನ್ನೂ ಅದೇ ರೀತಿ ಪರಿಷ್ಕರಿಸಿದೆ. ಎಲ್ಲೆಲ್ಲಿ ಬೇರೆಯ ಕಾರಣಕ್ಕಾಗಿ ಪಾಠಪರಿಷ್ಕರಣ ಮಾಡಿದೆಯೋ ಅಂಥಲ್ಲೆಲ್ಲ ತಿದ್ದು ಪಾಟನ್ನು ಚೌಕಕಂಸದಲ್ಲಿ ಕಾಣಿಸಿದೆ ಎಂದು ಎಂ.ವಿ.ಸೀ. ಅವರು ಸೂಚಿಸಿದ್ದಾರೆ.

೧. ಅಕ್ಕ ಸಾಲೆ[೧] ಯ ನೂರಿ ಗೊಕ್ಕಲೆಂದೆನಬೇಡ  
ಬೆಕ್ಕು ಬಂದಿಲಿಯ ಹಿಡಿವಂತೆ । [೨] ಊರಿಗೆ [೨]  
[೩]ರಕ್ಕಸನಹನು[೩] ಸರ್ವಜ್ಞ *

[ಅಕ್ಕಸಾಲೆ [೬] **]

* ಅಕ್ಕಸಾಲೆಯನ್ ಊರಿಗೊಕ್ಕಲ್ ಎನ್ದೆನಬೇಡ  
ಬೆಕ್ಕು ಬನ್ದಿಲಿಯ ಹಿಡಿವಸ್ತೆ; ಊರಿಗೆ ರಕ್ಕಸನಹನು.

"ಇದು ಕಿಟೆಲ್ ನಿಘಂಟುವಿನ ಪಾಠ. ಕಿಟೆಲ್ ಅನುನಾಸಿಕ ಸಹಿತ ಸಂಯುಕ್ತಾಕ್ಷರವನ್ನು ಉಪಯೋಗಿಸುವ ಕಡೆಯಲ್ಲೆಲ್ಲ ನಾವು ಈಗಿನ ರೂಢಿಯಂತೆ ಬಿಂದುವನ್ನು ಉಪಯೋಗಿಸುವೆವು; ಮತ್ತು ಅವರು ಸಂಧಿಯನ್ನು ಬಿಡಿಸಿ ಬರೆದಿರುವ ಕಡೆಗಳಲ್ಲಿ ಸಂಧಿಯನ್ನು ಈಗಿನ ರೂಢಿಯಂತೆ ಕೂಡಿಸಿ ಬರೆಯಲಾಗುವುದು. (ಉದಾ: 'ಒಕ್ಕಲ್ ಎನ್ದೆನಬೇಡ' ಎಂದಿರುವುದನ್ನು 'ಒಕ್ಕಲೆಂದೆನಬೇಡ' ಎಂದು ಬರೆಯಲಾಗುವುದು.)" (ಅದೇ ಕೃತಿ ಪ್ರಸ್ತಾವನೆ)

ಮುಂದೆಲ್ಲ ಕಿಟಲ್ ಪಾಠವನ್ನು ನಮ್ಮ ನಿಲುವಿಗೆ ಅನುಗುಣವಾಗಿ ಛಂದಸ್ಸಿನ ದೃಷ್ಟಿಯಿಂದ ಮಾತ್ರ ತಿದ್ದುಪಾಟು ಮಾಡಿ, ತಿದ್ದುಪಾಟು ಮಾಡಿದ ಪಾಠವನ್ನು ಮೇಲುಗಡೆ ಈ ಗ್ರಂಥದ ಪಾಠವನ್ನು (ಎಂದರೆ ಪರಿಷ್ಕೃತ ಕಿಟೆಲ್ ಪಾಠವಾಗಿ) ಕೊಟ್ಟು, ಕಿಟೆಲ್ ಕೋಶದ ಮೂಲ ಪಾಠವನ್ನು ಅಡಿಟಿಪ್ಪಣಿಯಲ್ಲಿ ಕಾಣಿಸಲಾಗುವುದು ಎಂದು ಸಂಪಾದಕರಾದ ವಿ. ವೆಂಕಟರಾವ್ ಮತ್ತು ಡಾ॥ ಕೆ. ಆರ್. ಗಣೇಶರವರು ಹೇಳಿಕೊಂಡಿದ್ದಾರೆ.

** ಪದ್ಯ ಅಥವಾ ಪದ್ಯಖಂಡವನ್ನು ಕಿಟೆಲ್ಲರು ಕೋಶದಲ್ಲಿ ಯಾವ ಪದಕ್ಕೆ ಪ್ರಯೋಗವಾಗಿ ಕೊಟ್ಟಿದ್ದಾರೆ, ಎಂಬುದನ್ನು ನಿರ್ದೇಶಿಸುವ ಸಲುವಾಗಿ ಆ ಪದವನ್ನು ಪದ್ಯದಡಿಯ ಬಲ ಪಕ್ಕದಲ್ಲಿ ಉಲ್ಲೇಖಿಸಿದ್ದಾರೆ.

ಉದಾ: ೨. " ಉಳ್ಳಲ್ಲಿ [೧]ಉಣರಿಲ್ಲ[೧] ಉಳ್ಳಲ್ಲಿ [೨]ಉಡಲಿಲ್ಲ
ಉಳ್ಳಲ್ಲಿ ದಾನ [೩]ಕೊಡದವನ । ಒಡವೆ[೩]
[೪] ಕಳ್ಳಗೆ [೪] ನೃಪಗೆ ಸರ್ವಜ್ಞ " ೩

[ಉಳ್ಳ ೨೫೧]

೩. ಸುಣ್ಣವಿಲ್ಲದ [೧]ವೀಳ್ಯ[೧] ಬಣ್ಣವಿಲ್ಲದ ಮದುವೆ.
ಹೆಣ್ಣಿಲ್ಲದವನ ಸಂಸಾರ । ಮಳೆ[೨] ಲೊಳು[೨]
ಎಣ್ಣೆ ಹೊ ೩ಯ್ದಂತೆ ಸರ್ವಜ್ಞ

[ವೀಳ್ಯೆಯ ೧೪೨೫ ರಂ ಸಾರ ೧೪೭೮ಹೆಣ್ಣು ೧೬೭೯]

---

೨.). ೧. ಉಣಲೊಲ್ಲ (ಪ. ೩೬೫). ೨. ಉಡಲಿಲ್ಲ (ಪ). ೩ – ಒಡವೆಯ (ಕಿ), – ಒಡೆವೆಯದು (ಉa ೬೦೩), ಕೊಂಡಲೊಲ್ಲದವನೊಡವೆ (ಉ ೬೮೩), ಗೊಂಡಲೊಲ್ಲನವನೊಡವೆ(ಪ), ೪. ಕಳ್ಳಂಗೆ (ಉa)

೨. ೧. ವೀಳ್ಯೆ (ಕಿ), ವೀಳೆ (ಉ ೧೬೮೪), ೨. ಲೊಳಗೆ (ಉ) ೩. ವಿಂದಂತೆ (ಉ) [ಈ. ಪದ್ಯ. ಪ. ದಲ್ಲಿಲ್ಲ]

ಕಿಟೆಲ್ ನಿಘಂಟುವಿನಲ್ಲಿ ಯಾವ ಕ್ರಮದಲ್ಲಿ ಪ್ರಯುಕ್ತ ಪದ್ಯಗಳು ದೊರೆತವೋ ಅದೋ 'ಅ' ಕಾರಾದಿ ಕ್ರಮದಲ್ಲಿ ಸರ್ವಜ್ಞನ ವಚನಗಳನ್ನು ಮುದ್ರಿಸಲಾಗಿದೆ. ಪ್ರತಿ ಪದ್ಯದ ಪಕ್ಕದಲ್ಲಿ ಪದ್ಯವು ನಿಘಂಟುವಿನ ಯಾವ ಪದಕ್ಕೆ (ಅಥವಾ ಪದಗಳಿಗೆ) ಉದಾಹೃತವಾಗಿದೆ ಎಂಬುದನ್ನು ನಿಘಂಟುವಿನ ಪುಟಸಂಖ್ಯೆಯೊಂದಿಗೆ ಸೂಚಿಸಲಾಗಿದೆ. ಪದ್ಯಗಳನ್ನು 'ಪದ್ಧತಿ' ಗಳಿಗೆ ಹೊಂದಿಸಿ ಜೋಡಿಸುವ ಆಲೋಚನೆಯನ್ನು ಕೈಬಿಡಲಾಯಿತು. ಆದರೂ ಹಲವು ಪದ್ಧತಿಗಳನ್ನು ಪ್ರತಿನಿಧಿಸುವ ಪದ್ಯಗಳು ಕಿಟೆಲ್ ಕೋಶದ ಸರ್ವಜ್ಞನ ವಚನಗಳು ಎಂಬ ಸಂಗ್ರಹದಲ್ಲಿದ್ದು, ಅನುದ್ದಿಷ್ಟವಾಗಿ ಇದೊಂದು ಪ್ರಾತಿನಿಧಿಕ ಸಂಗ್ರಹವಾಗಿ ಪರಿಣಮಿಸಿದೆ ಎಂದು ಹೇಳಬಹುದು.

# ರೆವರೆಂಡ್ ಚೆನ್ನಪ್ಪ ಉತ್ತಂಗಿ (1881 – 1962)


ರೆ. ಚೆನ್ನಪ್ಪ ಉತ್ತಂಗಿ

ಕ್ರೈಸ್ತ ಧರ್ಮ ಉಪದೇಶಕರಾಗಿದ್ದ ಇವರ ಪೂರ್ಣ ಹೆಸರು ರೆವೆರೆಂಡ್ ಚೆನ್ನಪ್ಪ ದಾನಿಯಲ್ಲಪ್ಪ ಉತ್ತಂಗಿ. ಇವರು ಧಾರವಾಡದಲ್ಲಿ ಡಿಸೆಂಬರ್ ೦೯-೧೮೮೧ ರಂದು ಜನಿಸಿದರು. ಉತ್ತಂಗಿ ಚೆನ್ನಪ್ಪನವರು ಅಸ್ತವ್ಯಸ್ತಗೊಂಡು ತಾರುಮಾರಾಗಿದ್ದ ಸರ್ವಜ್ಞನ ವಚನಗಳನ್ನು ಶಾಸ್ತ್ರೀಯವಾಗಿ ಅಣಿಗೊಳಿಸಿ, ಸರ್ವಜ್ಞನ ವಾಣಿಯನ್ನು ಮನೆಮನೆಗೆ ತಲುಪಿಸಿ ಅವನ ಸಮಗ್ರ ದರ್ಶನವನ್ನು ಮಾಡಿಸಿದ ಕೀರ್ತಿವಂತರು. ಕಾರಣಾಂತರದಿಂದ ವೀರಶೈವ ಧರ್ಮದಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡು ಕಾಲಕ್ರಮೇಣ ಧಾರವಾಡದಲ್ಲಿ ನೆಲೆಸಿದರು.

ಭಾರತೀಯ ಕ್ರೈಸ್ತರಾದ ಉತ್ತಂಗಿಯವರಿಗೆ ಕನ್ನಡ ನಾಡು ನುಡಿ ಬಗೆ ವಿಷೇಷ ಒಲವಿತ್ತು. ಉತ್ತಂಗಿಯವರು ಸಂಶೋಧಕರಾಗಿ, ಸಂಪಾದಕರಾಗಿ, ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಅದ್ವಿತೀಯವಾದದು. ಸಾಹಿತ್ಯ ಮಂದಿರವನ್ನು ಮುಂಬಾಗಿಲಿನಿಂದ ಪ್ರವೇಶಿಸದೆ, ಹಿಂಬಾಗಿಲಿನಿಂದ ಒಳ ಹೊಕ್ಕವರಲ್ಲೊಬ್ಬರಾಗಿ, ಕನ್ನಡ ಮಾತೆಯ ಹಿತ್ತಲ ಬಾಗಿಲಿನಲ್ಲಿ ನಿಂತು ಬೇಡುವವನಾದುದರಿಂದ ಉತ್ತಂಗಿ ಚೆನ್ನಪ್ಪನವರಿಗೆ "ತಿರುಳ್ಗನ್ನಡದ ತಿರುಕ" ಎಂಬ ಕಾವ್ಯನಾಮವಿದೆ.

ಸಂಪಾದನ ಕ್ಷೇತ್ರದಲ್ಲಿ ಉತ್ತಂಗಿ ಚೆನ್ನಪ್ಪನವರ ಹೆಸರು ಸ್ಥಿರವಾಗಿ ಉಳಿದಿರುವುದು ಅವರು ಸಂಪಾದಿಸಿರುವ "ಸರ್ವಜ್ಞನ ವಚನಗಳು" ಎಂಬ ಕೃತಿಯಿಂದ. ತ್ರಿಪದಿ ರೂಪವಾಗಿ ರಚಿಸಿದ , ಸರ್ವಜ್ಞನ ವಚನಗಳು ಎಂಬ ಅವರ ಗ್ರಂಥದಲ್ಲಿ ರಾವ್‌ಸಾಹೇಬ ಫ. ಗು. ಹಳಕಟ್ಟಿಯವರ ಮುನ್ನುಡಿಯಿದೆ. ಅಂದಿನ ಕಾಲದಲ್ಲಿ ಗ್ರಂಥಸಂಪಾದನಶಾಸ್ತ್ರದ ತತ್ವಗಳನ್ನು ಅಳವಡಿಸಿಕೊಂಡು ಪ್ರಕಟವಾದ ಮೊಟ್ಟ ಮೊದಲನೆಯ ಗ್ರಂಥ ಇದಾಗಿದೆಯೆಂದು ಹೇಳಿದರೆ ತಪ್ಪಾಗಲಾರದು.

## ೧.

## ಉತ್ತಂಗಿ ಚೆನ್ನಪ್ಪನವರು ಸರ್ವಜ್ಞ ಪ್ರಪಂಚವನ್ನು ಪ್ರವೇಶಿಸಿದ ಬಗೆ:

ರೆವರೆಂಡ್ ಚೆನ್ನಪ್ಪ ಉತ್ತಂಗಿಯವರು ಬಾಲ್ಯದಲ್ಲಿ ಅಚ್ಚ ಕನ್ನಡವನ್ನಲ್ಲದೆ ಮತ್ತೊಂದನ್ನರಿಯದವರು. ಮಿಶನರಿ ಸೇವೆಯಲ್ಲಿದ್ದರೂ ಪಾದರಿ ಕನ್ನಡಕ್ಕೆ ಮರುಳಾಗದ ಮಾದರಿ ಕನ್ನಡವನ್ನೇ ಆಡಿದರು. ತಿರುಳು ಕನ್ನಡದಲ್ಲಿಯೇ ಬರೆದವರು. "ಚೆನ್ನಪ್ಪನವರಲ್ಲಿ ವಿದೇಶಿ ಪಾದ್ರಿಗಳು ಕೆಲವರು ಕನ್ನಡವನ್ನು ಕಲಿಯುತ್ತಿದ್ದರು. ಅವರಿಗೆ ಸರ್ವಜ್ಞನ ವಚನಗಳಲ್ಲಿ ತೀವ್ರವಾದ ಆಸಕ್ತಿ ಉಂಟಾಗಿ, ಆ ಮಹಾನುಭಾವನನ್ನು ಕುರಿತು ಹಲವು ಹನ್ನೊಂದು ಪ್ರಶ್ನೆ ಕೇಳುತ್ತಿದ್ದರು. ಆಗ ಗೊತ್ತಾಯಿತಂತೆ ಉತ್ತಂಗಿಯವರಿಗೆ "ನಾನು ಸರ್ವಜ್ಞನನು ಬಿಟ್ಟರೂ ಸರ್ವಜ್ಞನು ನನ್ನನು ಬಿಡಲೊಲ್ಲನು" ಎಂದು ಎಲ್ಲಿ ಹೋದರೂ ಅವನ ಸಂಬಂಧವಾದ ಯೋಚನೆಗಳೇ ಇವರ ತಲೆಯೊಳಗೆ ತುಂಬಿ ಆ ಮಿಶನರಿಯವರು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುವ ಮೊದಲು ಅವನ ಗ್ರಂಥವನ್ನೇ ಶೋಧಿಸಬೇಕೆಂದು ನಿಶ್ಚಯ ಮಾಡಿಕೊಂಡರಂತೆ."[೪]

ಮರುದಿನ ಎಂದಿನಂತೆ ಕನ್ನಡವನ್ನೂ ಹೇಳಿಕೊಡಲಿಕ್ಕೆ ಇವರು ಮಿಶನರಿಗಳಲ್ಲಿಗೆ ಹೋದಾಗ ಮಹಾರಾಷ್ಟ್ರದಲ್ಲಿ ಕೆಲಸ ಮಾಡುತ್ತಿದ್ದ 'ನೆಲ್ಸನ್ ಫ್ರೇಜರ್' ಎಂಬುವರು ಸರ್ವಜ್ಞನ ವಚನಗಳನ್ನು ಆಂಗ್ಲಭಾಷೆಗೆ ಪರಿವರ್ತಿಸುತ್ತಿದ್ದುದನ್ನು ಕಂಡರು. ಕಷ್ಟಕರವಾದ ಈ ಕೆಲಸವು ಸಾಂಗವಾಗಿ ಸಾಗುವಂತೆ ಅವರು ಸರ್ವಜ್ಞ ಪದ್ಯಗಳ ಒಂದು ವರ್ಣಾನುಕ್ರಮಣಿಕೆಯನ್ನು ಮಾಡಿದ್ದಲ್ಲದೆ ಅವನ ಕೋಶ ರಚನೆಗೂ ಪ್ರಯತ್ನಿಸುತ್ತಿದ್ದುದು ಇವರಿಗ ತಿಳಿಯಿತು. ಇದರಿಂದ ಚೆನ್ನಪ್ಪನವರಲ್ಲಿ ಅಪೂರ್ವ ಜಾಗ್ರತೆ ಉಂಟಾಗಿ ಅವರೂ ಅದೇ ಪದ್ಧತಿಯನ್ನನುಸರಿಸಿ ಕೆಲಸ ಮಾಡಬೇಕೆಂಬ ಹವ್ಯಾಸವು ಹುಟ್ಟಿತು.

ಇದೇ ಸಮಯಕ್ಕೆ ಕಲ್ಕತ್ತಾದಿಂದ (ಕೆಲಸದ ನಿಮಿತ್ತ) ವರ್ಗವಾಗಿ ಧಾರವಾಡಕ್ಕೆ ರೈಲ್ವೆ ಅಧಿಕಾರಿಯೊಬ್ಬರು ಬಂದು, ಅವರು ಹೋದಲ್ಲೆಲ್ಲಾ ತಾವು ಕಂಡ ವೈಚಿತ್ರ್ಯಗಳನ್ನು ಬರೆದಿಡುವ ಹವ್ಯಾಸವುಳ್ಳವರಾಗಿದ್ದರು. ಕನ್ನಡಿಗರ ಆಚಾರ – ವಿಚಾರಗಳನ್ನು ತಿಳಿಯಲು ಯತ್ನಿಸುತ್ತಿದ್ದ ಅವರು ಹೇಗೋ ಸರ್ವಜ್ಞನ ವಿಷಯವನ್ನು ಕೇಳಿ ಅವನ ವಿಚಾರಗಳನ್ನು ಮೆಚ್ಚಿಕೊಂಡರು. ಒಂದು ದಿನ ಆ ವಿಷಯವನ್ನು ಉತ್ತಂಗಿಯವರಲ್ಲಿ ಹೇಳಿಕೊಂಡರು. ಇವರು ಅವರಿಗೆ ಸಹಾಯಮಾಡುವುದಾಗಿ ಒಪ್ಪಿ ವಾರಕ್ಕೊಮ್ಮೆ ಇಬ್ಬರೂ ಕೂಡಿ ಸರ್ವಜ್ಞ ಅಧ್ಯಯನ ಮಾಡತೊಡಗಿದರು. ತಿಳಿದುಕೊಂಡ ಪದ್ಯಗಳನ್ನು ಇಂಗ್ಲೀಷ್‌ನಲ್ಲಿ ಉತ್ತಂಗಿಯವರು ಭಾಷಾಂತರಿಸಿ ಕೊಡುವುದು, ಹೀಗೆ ನಡೆಯುತ್ತಿದ್ದಿತು. ಸರ್ವಜ್ಞನ

ವಿಚಾರಗಳಿಗೆ ಮಾರುಹೋಗಿದ್ದ ಆ ವಂಗಬಂಧು ಒಂದು ದಿನ ಚೆನ್ನಪ್ಪನವರೊಂದಿಗೆ ಸಂಭಾಷಿಸುವಾಗ ಸರ್ವಜ್ಞ ಗ್ರಂಥವನ್ನು ವಿವಿಧ ಹಿಟ್ಟುಗಳಿಂದ ತುಂಬಿ ತಯಾರಿಸಿ ತಂದಿಟ್ಟ ತಬಕಕ್ಕೆ (ತಾಟು=ತಟ್ಟೆ) ಸರಿಮಾಡಿ ಹೇಳಿದರಂತೆ. ಅಷ್ಟೇಅಲ್ಲ, ಅದು ಕನ್ನಡದ ಸೌಂದರ್ಯದ ಸೊಬಗಿನಿಂದ ಮೆರೆಯುತ್ತ ತಿರುಳುಗನ್ನಡದ ತನಿಗಂಪನ್ನು ಬಹುದೂರದವರೆಗೆ ಬೀರುತ್ತಾ ಕಂಗೊಳಿಸುವ ಕರ್ನಾಟಕದ ಹೂದೋಟವೆಂದೂ ಅದರಲ್ಲಿ ಕೆಲವು ದಿವಸ ತಿರುಗಾಡಿದರೆ ಸಾಕು ತನ್ನಂಥ ಪರದೇಶಸ್ಥನ ವಸ್ತ್ರಗಳಾದರೂ ಸುವಾಸಿಸದಿರಲಾರದೆಂದೂ ಒಮ್ಮೆ ಕನ್ನಡಿಗನ್ನೊಬ್ಬ ಆ ಅಧಿಕಾರಿಗೆ ಹೇಳಿದನಂತೆ, ಅದನ್ನೂ ಆತ ಉತ್ತಂಗಿಯವರಿಗೆ ತಿಳಿಸಿದರು.

ಸಾವಿರಾರು ಮೈಲುಗಳ ದೂರದಿಂದ ಬಂದು ಸ್ವಲ್ಪ ಕನ್ನಡವನ್ನಭ್ಯಾಸಮಾಡಿದ ಆ ವಿಲಾಯತಿಯ ಮಿಶನರಿಯವರೂ ನೂರಾರು ಮೈಲಿ ದೂರದಿಂದ ಬಂದು ಏನೂ ಕನ್ನಡವನ್ನರಿಯದ ಆ ವಂಗಬಂಧುವೂ ತಮ್ಮ ದೇಶದ ಕವಿಯಲ್ಲದ ಸರ್ವಜ್ಞನ ವಿಷಯಕ್ಕೆ ಇಷ್ಟು ಪ್ರಯಾಸಪಡುತಿರಲು ಕರ್ನಾಟಕಸ್ಥರೂ, ಕನ್ನಡಿಗರೂ ಸರ್ವಜ್ಞನ ಜಿಲ್ಲೆಯಲ್ಲಿ ಜನಿಸಿದವರು ಆದ ಉತ್ತಂಗಿಯವರಿಗೆ ಈ ವಿಷಯದಲ್ಲಿ ನಿಶ್ಚಿಂತರಾಗಿ ಕುಳಿತುಕೊಳ್ಳುವುದು ಸುತರಾಂ ಸರಿಯಲ್ಲವೆನಿಸಿತು. ಆ ದಿನದಿಂದಲೇ ಉತ್ತಂಗಿಯವರು ಕವಿ ಸರ್ವಜ್ಞನ ಸೇವೆಗೆ ಕಂಕಣಬದ್ಧರಾದರು. ಗ್ರಂಥ ಶುದ್ಧೀಕರಣದ ಯೋಚನೆಗೊಳಗಾದರೂ ಹಾಗೂ ತರ್ಜುಮೆಯ ಕೆಲಸವನ್ನು ನಿಲ್ಲಿಸಿ ಗ್ರಂಥ ಸಂಶೋಧನೆಗೆ ಕೈ ಹಚ್ಚಿ, ಯಾವುದೋ ಒಂದು ಶಕ್ತಿ ಉತ್ತಂಗಿಯವರನ್ನು ಸರ್ವಜ್ಞ ಪ್ರಪಂಚಕ್ಕೆ ಸೆಳೆದೊಯ್ದಿತು!.

ಉತ್ತಂಗಿ ಚೆನ್ನಪ್ಪನವರು ಸರ್ವಜ್ಞನ ತ್ರಿಪದಿಗಳ ಪ್ರತಿಗಳಿಗಾಗಿ ಪಟ್ಟ ಪಾಡು ಅಷ್ಟಿಷ್ಟಲ್ಲ. ಕಂಡಕಂಡವರ ಕಡೆ ಕೈ ಚಾಚಿದ ಉತ್ತಂಗಿಯವರಿಗೆ ನಿರಾಶೆಯೇ ಕಾದಿತ್ತು! ಮಠ ಮಾನ್ಯಗಳಿಗೆಲ್ಲ ವಿಶೇಷವಾಗಿ ವೀರಶೈವಮಠಗಳಿಗೆ ಹೋಗಿ ಕಾಡಿಬೇಡಿದರೂ, ಕೆಲವೆಡೆಗಳಲ್ಲಿ ಮಾತ್ರ ಸಿಕ್ಕಿದ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಚನ್ನಪ್ಪನವರಿಗೆ ಮೈಸೂರು ಪ್ರಾಚ್ಯಕೋಶಾಲಯದಿಂದಲೂ ಎರಡೂ ಪ್ರತಿಗಳು ದೊರೆತವು. ನಂತರ ಒಂದು ವರ್ಷದೊಳಗಾಗಿ ಬೇರೆಬೇರೆ ಕಡೆಯಿಂದ ಹತ್ತೆಂಟು ಪ್ರತಿಗಳು ದೊರೆತಿದ್ದವು.

"ನಾನೊಬ್ಬ ತಿಳಿತಿಳಿವಿನ ತಿರುಕ, ತಿರುಳುಗನ್ನಡ ತಿರುಕ, ಕಾಡಿ ಬೇಡುವನಲ್ಲ, ಬೇಡಿಬಂದವನಲ್ಲ, ನೋಡಿ ಬಿಟ್ಟವನಲ್ಲ. ಮಹಾಕವಿಗಳು ಒಗೆದು ಬಿಟ್ಟಿದ್ದ ಎಂಜಲವನ್ನೂ ಪ್ರಸಾದವೆಂದೆತ್ತಿ ತಂದು, ಕನ್ನಡಕ್ಕಾಗಿ ಹಸಿದ ಮಕ್ಕಳೆಲ್ಲರನ್ನು ಕರೆದುಕೊಂಡ ತಿರುಕ. ಇದಕ್ಕಾಗಿ ತಿರುಕನೊಬ್ಬನನ್ನು ಸರ್ವಜ್ಞ ಕವಿ

ತಳುಕು ಹಾಕಿಕೊಂಡ ತಿರುಕ. ಹೊರಗನ್ನು ನೋಡಿ, ಒಳಗನ್ನರಿಯದವರ ಒಳಗನ್ನರಿಯಬೇಕೆಂದು ತಿರುಗಾಡಿದ ತಿರುಕ." ಎನ್ನುವ ಉತ್ತಂಗಿಯವರು ವೀರಶೈವ ಧರ್ಮವನ್ನು ಅರಿತುಕೊಳ್ಳಲು ಯತ್ನಿಸಿದ್ದು ಸರ್ವಜ್ಞನಿಗಾಗಿಯೇ. ಇದೇ ಸಮಯಕ್ಕೆ "ಜ್ಞಾನವೆಂದರೆ ಕ್ರಿಯೆ, ಕ್ರಿಯೆ ಎಂದರೆ ಜ್ಞಾನ" ಎಂದು ಅವರಿಗೆ ಮನವರಿಕೆಯಾದುದರಿಂದ ಕ್ರಯಾರಹಿತವಾದ ತತ್ವ ವಿಚಾರಕ್ಕೆ ವಿಮುಖನಾಗಿ, ಕ್ರಿಯಾ ಸಹಿತವಾದ ಅನುಭಾವಕ್ಕೆ ಅಭಿಮುಖನಾದೆ ಎಂದು ಹೇಳಿಕೊಂಡಿದ್ದಾರೆ.

ಸರ್ವಜ್ಞನು ಕ್ರಾಂತಿಪುರುಷನಲ್ಲದೆ, ಸಂಕ್ರಾಂತಿ ಪುರುಷ. ಜ್ಞಾನಿ, ಪ್ರವಾದಿ, ಸುಧಾರಕ, ಎಲ್ಲವನ್ನು ಧ್ವಂಸ ಮಾಡಿ ಹೊಸದಾಗಿ ಸುಂದರವಾದ ಜತತ್ತನ್ನು ಪುನಃ ಸೃಷ್ಟಿಸಲು ಬಂದ ರುದ್ರಶಕ್ತಿ. ಮತ, ಆಚಾರ, ಸಂಕೇತ, ಸಮಯಾಚಾರ ಮುಂತದ ನಿರ್ಜೀವಿಯಾದ ಬಹಿರಂಗ ವೇಷಗಳನ್ನೆಲ್ಲ ನಿಶ್ಯೇಷ ಮಾಡಲು ಅವತಾರವೆತ್ತಿದ ಆತ್ಮ ವಿನಾಶ ಮಾಡಿಕೊಳ್ಳುವವರ ಗೋತ್ರಕ್ಕೆ ಸೇರಿದವನಲ್ಲ ಎನ್ನುತ್ತಾರೆ ಉತ್ತಂಗಿ.

೨

ಕಿಟೆಲ್ಲರ ತರುವಾಯ ಸರ್ವಜ್ಞ ವಚನಗಳ ಸಂಗ್ರಹಣ, ಪರಿಷ್ಕರಣ ಮತ್ತು ಪ್ರಕಾಶನಕ್ಕೆ ಮೊಟ್ಟಮೊದಲಿಗೆ ಕೈ ಹಾಕಿ ಅನೇಕ ವರ್ಷಗಳ ಸರ್ವಜ್ಞೋಪಾಸನೆಯ ಬಳಿಕ ಸವಿಸ್ತಾರವಾದ ಪೀಠಿಕೆಯೊಂದಿಗೆ ರೆವೆರೆಂಡ್ ಚೆನ್ನಪ್ಪ ಉತ್ತಂಗಿಯವರು ತಮ್ಮ ಪರಿಷ್ಕೃತ ಮುದ್ರಣವನ್ನು ೧೯೨೩ ರಲ್ಲಿ ಹೊರತಂದರು. ಮೂಲ ಹಸ್ತಪ್ರತಿಗಳ ಸ್ವರೂಪದ ಬಗೆಗೆ ಅವರ ಅಭಿಪ್ರಾಯಗಳು ಗಮನಾರ್ಹವಾದವು.

**ಸರ್ವಜ್ಞನ ತ್ರಿಪದಿಗಳ ಹಸ್ತಪ್ರತಿಗಳ ಬಗೆಗೆ ಅವರ ಮಾತುಗಳನ್ನು ಹೀಗೆ ಸಂಗ್ರಹಿಸಬಹುದು:**

ಸರ್ವಜ್ಞನು ಜೀವಂತವಿರುವಾಗ ಬರೆಯಲ್ಪಟ್ಟ ಓಲೆಯ ಪ್ರತಿಗಳು ದೊರರೆತಿಲ್ಲ. ಇದುವರೆಗೂ ಲಿಖಿತವಾದ ಸರ್ವಜ್ಞನ ಕೈಬರಹದ ಪ್ರತಿಗಳನ್ನು ಮೂಲ ಸಂಗ್ರಹಗಳೆಂತಲೂ ನೂತನ ಸಂಗ್ರಹಗಳೆಂತಲೂ ಎರಡು ಭಾಗಗಳಾಗಿ ವಿಭಾಗಿಸಬಹುದು. ಮೊದಲನೆಯ ತರದ ಪ್ರತಿಗಳು ಅಲ್ಲಲ್ಲಿ ವ್ಯತ್ಯಾಸವುಳ್ಳವುಗಳಾಗಿದ್ದರೂ ಬಹುಶಃ ಎಲ್ಲಾ ಪದ್ಯಗಳು ಒಂದೇ ಕ್ರಮವನ್ನನುಸರಿಸಿ ಬರೆಯಲ್ಪಟ್ಟಿರುವುದರಿಂದ ಒಂದನ್ನೊಂದು ಹೋಲುತ್ತಿರುವುವು. ಆದರೆ ಎರಡನೆಯ ತರದ ಪ್ರತಿಗಳು ಹಾಗಲ್ಲ. ಇವು ಸ್ವತಂತ್ರ ಕ್ರಮದಿಂದ ಬರೆಯಲ್ಪಟ್ಟಿದ್ದು ಪ್ರತಿ ಒಂದರಲ್ಲಿಯೂ ಹೊಸ ಪದ್ಯಗಳು ದೊರೆಯುತ್ತಾ ಹೋಗುವವು. ಇದರಿಂದ ಸರ್ವಜ್ಞನು ಕಾಲವಾದ ಕೆಲವು ವರ್ಷಗಳಲ್ಲಿ ಆಗ್ಗೆ ರೂಢಿಯಲ್ಲಿದ್ದ ಪದ್ಯಗಳ ಹೊರ್ತು ಅನೇಕ ಹೊಸ ಪದ್ಯಗಳುಂಟಾದವೆಂದೂ ತಿಳಿದುಬರುತ್ತದೆ. ನಮಗೆ ದೊರೆತ ಮೈಸೂರು, ಮದ್ರಾಸ್, ಪ್ರಾಚ್ಯ ಕೋಶಾಲಯಗಳ ಪ್ರತಿಗಳಲ್ಲಿಯೂ ಇದೇ ತರದ ಭೇದವು

ಒಡೆದು ಕಾಣುತ್ತದೆ. ಬಹುಶಃ ಈಗ ಅಚ್ಚಾದ ಗ್ರಂಥಗಳೆಲ್ಲ ಈ ಎರಡು ತರದ ಕೈ ಬರಹದ ಪ್ರತಿಗಳ ಮಿಶ್ರ ಮುದ್ರಣಗಳಿರುವವಷ್ಟೆ. ಇವನ ಹಸ್ತ ಲಿಖಿತಗಳಲ್ಲಿ ಹಳಗನ್ನಡ 'ಱ' ಎಂಬ ಅಕ್ಷರವು ಆಗಾಗ್ಗೆ ದೊರೆಯುವುದರಿಂದ ಅವನ ಕಾಲವನ್ನು ತಿಳಿಯುವುದಕ್ಕೆ ಸಹಾಯವಾಗುವುದು. ಕನ್ನಡದ ಹಳೇ ಬರಹ ಪದ್ಧತಿಯಂತೆ ಇವನ ಪ್ರತಿಗಳಲ್ಲಿ ಸೊನ್ನೆಯ ಬದಲಾಗಿ ಆಯಾ ವರ್ಗದ ಅನುನಾಸಿಕಗಳು ಬರುವುದಲ್ಲದೆ ಅ,ಆ, ಎಂಬ ಸ್ವರಗಳನ್ನು ಬಿಟ್ಟು ಉಳಿದ ಎಲ್ಲ ಸ್ವರಗಳು ವ್ಯಂಜನಗಳಿಂದಲೇ ಬರೆಯಲ್ಪಟ್ಟಿವೆ.

"ಸರ್ವಜ್ಞನ ಪದ್ಯಗಳ ಮೊದಲ ಮುದ್ರಣವಾದದ್ದು 1866 ರಲ್ಲಿ. ಧಾರವಾಡದ ಹುಚ್ಚಯ್ಯ ಹೊನ್ನಾಮಠ ಇವರಿಂದ ಶಿಲಾಮುದ್ರಣದ ಇದರಲ್ಲಿ 225 ಪದ್ಯಗಳೂ ಇವೆ. 1867ರಲ್ಲಿ ಬೆಂಗಳೂರಿನ ವೆಸ್ಲಿಯನ್ ಮಿಷನ್ನಿನವರು 105 ಪದ್ಯಗಳನ್ನು ಮುದ್ರಿಸಿರುವರು. 1920ರಲ್ಲಿ ಬೆಂಗಳೂರು ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸಿನವರು 'ನೀತಿಸಾರ' ಎಂಬ ಹೆಸರಿನಿಂದ ಒಂದು ಮುದ್ರನ ಹೊರ ತಂದಿದ್ದರು."* ಈ ಎಲ್ಲಾ ಮುದ್ರಣಗಳೂ ತುಂಬಾ ದೋಷ ಪೂರ್ಣವಾಗಿವೆ. "ಸರ್ವಜ್ಞನ ಗ್ರಂಥವು ಗೋಡೆ ಬಿದ್ದು ಹೆಂಟೆಗಳು ಚೂರುಚೂರಾಗಿ ಒಡೆದು ಹೋಗಿರುವ ಒಂದು ಹಾಳುಮನೆಗೆ ಸರಿಯಾಗಿದೆ ಎಂದು ಹೇಳಬೇಕು. ಇಂಥ ಸ್ಥಿತಿಯಲ್ಲಿ ವಚನಗಳ ಮೂಲವನ್ನು ಗೊತ್ತು ಹಚ್ಚಿ ಅವುಗಳನ್ನು ಮುಂಚಿನ ಸ್ಥಿತಿಗೆ ತರುವಂಥದ್ದು ಕಷ್ಟಕರ.

ಕೈ ಬರಹದ ಪ್ರತಿಗಳನ್ನು ಚೆನ್ನಾಗಿ ಶೋಧಿಸ ಹೋದರೆ ಬರಹದ ದೋಷದಿಂದ ತಪ್ಪುಗಳು ಹೇಗೆ ಒಳನುಗ್ಗುವವೆಂದೂ ಕೇವಲ ಕಲ್ಪನೆಯಿಂದ ತಿದ್ದಲು ಯತ್ನಿಸಿದರೆ ಪದ್ಯಗಳು ಹೇಗೆ ಕೆಡುವವೆಂದೂ ತೋರಿಸುವುದಕ್ಕಾಗಿ ಉತ್ತಂಗಿ ಚೆನ್ನಪ್ಪನವರು ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ.

| ಬಳ್ಳಾರಿ ಗ್ರಂಥ: | ಬೆಂಗಳೂರು ನೀತಿಸಾರ: |
|---|---|
| ಅಂದಿನಾಪುಷ್ಪದತ್ತ ಒಂದೇ ವರುಷಿಯಾಗಿ | ಅಂದಿನ ಪುಷ್ಪದತ್ತ ಮುಂದೆ ವರುಷಿಯಾಗಿ |
| ಮುಂದೇವ ಸಾಲೆ ಸರ್ವಜ್ಞನೆಂದೆನಿಸಿ | ಸಂದೇಹಮುಳಿದು ಸರ್ವಜ್ಞನೆಂದೆನಿಸಿ |
| ನಿಂದವನು ನಾನೆ ಸರ್ವಜ್ಞ | ನಿಂದವನು ನಾನೆ ಸರ್ವಜ್ಞ |

*. ಜಿ. ಎ. ವಿರ್ಥ್ ಎಂಬ ಜರ್ಮನ್ ಪಾದ್ರಿ ೧೮೬೭ರಲ್ಲಿ ಹಲವು ನೂರು ಪದ್ಯಗಳನ್ನು ತನ್ನ ಪ್ರಾಕಾವ್ಯಮಾಲೆಯಲ್ಲಿ ಪ್ರಕಟಿಸಿದನು. ಚನ್ನಪ್ಪ ಉತ್ತಂಗಿಯವರೇ ಹಲವು ಮುದ್ರಣಗಳನ್ನು ಹೊರತಂದಿದ್ದಾರೆ.

ಇಲ್ಲಿ ಟೀಕಾಕಾರರು 'ಒಂದೇ ವರುಷಿಯಾಗಿ' ಎಂಬುದಕ್ಕೆ ಒಮ್ಮೆ ದೇವಸಭೆಯಲ್ಲಿ ಋಷಿಯಾಗಿದ್ದವನೆಂದು ಅರ್ಥ ಮಾಡದೆ ಹೋಗಿದ್ದಾರೆ. ಸಾಲೆ ಸರ್ವಜ್ಞನೆಂಬುವುದಕ್ಕೆ ಕಿಟೆಲ್ ಪಂಡಿತರು ಸಾಲೆಯಲ್ಲಿ ಕಲಿತವನೆಂದು ಅರ್ಥಮಾಡಿದ್ದಾರೆ. ಆದರೆ ಮೂಲಪ್ರತಿ ನೋಡಿದರೆ 'ಕುಂಬಾರ ಸಾಲೆ'ಯಲ್ಲಿ ಸರ್ವಜ್ಞನು ಬಾಲ್ಯವನ್ನು ಕಳೆದದ್ದರಿಂದ ಬಂದ ಹೆಸರೆಂದು ಸ್ಪಷ್ಟವಾಗುತ್ತದೆ.

ಪದ್ಯದ ಮೂಲರೂಪ:

ಅಂದಿನ ಪುಷ್ಪದತ್ತ ಬಂದ ವರರುಚಿಯಾಗಿ
ಮುಂದವ ಸಾಲೆ ಸರ್ವಜ್ಞನೆಂದೆನಿಸಿ
ನಿಂದವನು ನಾನೆ ಸರ್ವಜ್ಞ

ಇಂತಹ ದೋಷಗಳು 500ಕ್ಕೂ ಮಿಗಿಲಾಗಿವೆ ಉತ್ತಂಗಿ ತಿಳಿಸಿದ್ದಾರೆ. ಕಲ್ಪನೆಯಿಂದ ತಿದ್ದಿದರೆ ಪದ್ಯಗಳು ಹೇಗೆ ಕೆಟ್ಟುಹೋಗುತ್ತವೆ ಎಂಬುದಕ್ಕೆ ಉದಾಹರಣೆ:

| ಮುದ್ರಣ ಗ್ರಂಥ: | ಮೂಲಪ್ರತಿ: |
| --- | --- |
| ಆನೆಮುಕರದೊಳಡಗೆ ಭಾನುವೊಳು ಶಶಿಯಡಗ | ಆನೆಮುಕರದೊಳಡಗಿ ಭಾನುಸರಸಿಯೊಳಢಗಿ |
| ಲೇನುವೊಣೆಯವು ಜಗದೊಳಗೆ ಶಿವಯೋಗಿ | ಆನೆನ್ನ ಗುರುವಿನೊಳಡಗಿ ಸಂಸಾರ |
| ಮೌನದಿಂದಿರುವ ಸರ್ವಜ್ಞ | ತಾನೆತ್ತಣದು ಸರ್ವಜ್ಞ |
| [ಆನೆಯು ಕನ್ನಡಿಯೊಳಗೆ, ಸೂರ್ಯನ ಬೆಳಕಿನಲ್ಲಿ ಚಂದ್ರನು ಅಡಗಲಾಗಿ ಜಗದೊಳಗೆ ಏನು ಶೂನ್ಯತೆಯುಂಟಾಗುವುದು?] | [ಆನೆಯು ಕನ್ನಡಿಯಲ್ಲಿಯೂ, ಸೂರ್ಯನು ಸರೋವರದಲ್ಲಿಯೂ ಅಡಗಿರುವಂತೆ ನಾನು ನನ್ನ ಗುರುವಾದ ಪರಮಾತ್ಮನಲ್ಲಿ ಕೂಡಿಕೊಂಡಿರಲು ಸಂಸಾರವು ಹೇಗೆ ಅಂಟಿಕೊಳ್ಳವುದು] |

ಸರ್ವಜ್ಞನ ತ್ರಿಪದಿಗಳ ಮೂಲಪಾಠದ ನಿಷ್ಕರ್ಷೆಯ ಸಂಬಂಧವಾಗಿ ಇಂಥ ಹಲವಾರು ಸಮಸ್ಯೆಗಳು ಪರಿಹಾರಕ್ಕಾಗಿ ಕಾದಿವೆ. ಸರ್ವಜ್ಞನ ತ್ರಿಪದಿಗಳ ಸಂಗ್ರಹ ಮತ್ತು ಸಂಪಾದನ ಕಾರ್ಯಗಳನ್ನು ಒಂದು ತಪಸ್ಸು ಎಂಬಂತೆ ಸಾಧಿಸಿ ಕೃತಕೃತ್ಯರಾದ "ದಿ॥ ರೆ॥ ಚನ್ನಪ್ಪ ಉತ್ತಂಗಿಯವರು" ಸರ್ವಜ್ಞನ ಭಕ್ತರಾದರೂ ಸರ್ವಜ್ಞಾಂಕಿತ ಪದ್ಯಗಳೆಲ್ಲವೂ ಅವನವೆಂದು ನಂಬಿಲ್ಲ. ಸರ್ವಜ್ಞನ ಪದ್ಯಗಳನ್ನು

ಅನುಸರಿಸುವ ಅನ್ಯ ಕರ್ತೃಕ ಪದ್ಯಗಳು ಹೇರಳವಾಗಿ ಪ್ರಕ್ಷೇಪವಾಗಿವೆ ಎಂದು ಹೇಳಿ ಸರ್ವಜ್ಞವು ಯಾವುವು, ಯಾವುವು ಅಲ್ಲ, ಯಾವುವು ಸಂದೇಹಾಸ್ಪದ ಎಂಬುದನ್ನು ಮೊದಲೆರಡು ಮುದ್ರಣಗಳಲ್ಲಿ ಗುರುತಿಸುವ ಪ್ರಯತ್ನವನ್ನೂ ಮಾಡಿದ್ದಾರೆ ಅವರು. "ಕನ್ನಡ ಸಂಪಾದನಾ ಕ್ಷೇತ್ರದಲ್ಲಿ ಉತ್ತಮ ಆವೃತ್ತಿಯೆಂದರೆ "ಚನ್ನಪ್ಪ ಉತ್ತಂಗಿ" ಅವರಿಂದ ಸಂಪಾದಿತವಾಗಿ ಬೆಂಗಳೂರು ಅಂಡ್ ಪಬ್ಲಿಷಿಂಗ್ ಕಂಪೆನಿಯಿಂದ ೧೯೨೦ ರಲ್ಲಿ ಪ್ರಕಟವಾದ ಗ್ರಂಥವಾಗಿದೆ. ಇದರಲ್ಲಿ ೧–೫೨೦ ವಚನಗಳನ್ನು ಪಾರಮಾರ್ಥಿಕವೆಂದೂ, ೫೨೧–೧೪೨೭ ವಚನಗಳನ್ನು ನೈತಿಕವೆಂದೂ, ೧೪೨೮–೧೯೨೮ನ್ನು ಲೌಕಿಕವೆಂದೂ ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಇವು ಬೇರೆ ಬೇರೆಯಾಗಿ ಪ್ರಕಾಶಿತವಾಗಿರುವುದೂ ಉಂಟು. ಕೆಲವು ಹಸ್ತ ಪ್ರತಿಗಳಲ್ಲಿ ೨೭ ಪದ್ಧತಿಗಳೆಂದೂ ಮತ್ತೆ ಕೆಲವರಲ್ಲಿ ೨೯ ಎಂದೂ ವಿಂಗಡಿಸಿರುವುದಾಗಿ ಕವಿ ಚರಿತೆಕಾರರು ಹೇಳುತ್ತಾರೆ. ಆದರೆ ಉತ್ತಂಗಿ ಚೆನ್ನಪ್ಪನವರು ೩೨ ಪದ್ದತಿಗಳನ್ನು ಗುರುತಿಸಿದ್ದಾರೆ. ಇವರು ತಾವು ಸಂಗ್ರಹಿಸಿರುವ ಒಟ್ಟು ೧೯೨೮ ಪದ್ಯಗಳನ್ನು ಪ್ರಕಟಿಸಿದ್ದರೂ, ೧೩೪೨ ಮಾತ್ರ ಸರ್ವಜ್ಞ ಕೃತವೆಂದೂ, ೫೨೮ ಅನ್ಯಕೃತವೆಂದೂ ಕಂಠಸ್ಥ ಹಾಗೂ ನವೀನ ಪದ್ಯಗಳು ೩೮ ಎಂದೂ, ಇವುಗಳಲ್ಲಿ ಸರ್ವಜ್ಞ ಕೃತವಾದುವು ಕೆಲವಿರಬಹುದೆಂದೂ ಸಂಶಯಾತ್ಮಕವಾದವು ೫ ಪದ್ಯಗಳೆಂದೂ ಹೇಳಿದ್ದಾರೆ. ಈ ವಚನಗಳು ೧೯೨೪, ೧೯೪೧, ೧೯೪೭, ೧೯೫೦ ಮೊದಲಾಗಿ ಹಲವು ಬಾರಿ ಪ್ರಕಟವಾಗಿರುವುದುಂಟು."[5]

ಸರ್ವಜ್ಞ ವಚನಗಳ ಮೂಲ ಪಾಠವನ್ನು ನಿಷ್ಕರ್ಷೆ ಮಾಡುವಲ್ಲಿ ಲಿಖಿತ ಕವಿಕೃತಿಗಳ ವಿಷಯದಲ್ಲಿ ಅನ್ವಯಿಸುವ ಗ್ರಂಥಸಂಪಾದನಾಶಾಸ್ತ್ರದ ನಿಯಮಗಳನ್ನು ಸಂಪೂರ್ಣವಾಗಿ ಅನ್ವಯಿಸುವುದು ಕಷ್ಟವೆಂದು ತೋರುತ್ತದೆ. ಕೃತಿ ಪದ್ಯ ಕಾವ್ಯವಾಗಿದ್ದರೆ, ನಿರ್ದಿಷ್ಟ ಪದ್ಯದ ಒಂದು ಸಂದರ್ಭದಲ್ಲಿ ಉಪಲಬ್ದವಾಗಿರುವ ಎಲ್ಲ ಪಾಠಾಂತರಗಳಲ್ಲಿಯೂ ಛಂದೋದೋಷ ಕಂಡುಬಂದರೆ, ಆ ಪದ್ಯದ ಛಂದಸ್ಸನ್ನು ಸರಿಪಡಿಸುವುದರಿಂದ ಕವಿಪಾಠ ದೊರಕುವ ಸಾಧ್ಯತೆಯಿದೆ.

ಅಂಶಲಯದ ರಹಸ್ಯವನ್ನರಿಯದ ಪ್ರಾಚೀನ ಸಂಪ್ರತಿಕಾರರೇ ಸರ್ವಜ್ಞನ ತ್ರಿಪದಿಗಳಲ್ಲಿ ಚತುರ್ಮಾತ್ರಾಗಣಗಳು ಕಂಡುಬಂದಲ್ಲೆಲ್ಲಾ ಪ್ರಾಯಶಃ ಅವನ್ನು ಪಂಚಮಾತ್ರಗಣಗಳಾಗಿ ಮಾರ್ಪಡಿಸುವ ಪ್ರಯತ್ನ ಮಾಡಿದ್ದಾರೆ. ಇದರಿಂದಾಗಿ, ಸರ್ವಜ್ಞನ ತ್ರಿಪದಿಗಳನ್ನು ಮೊದಲ ಬಾರಿಗೆ ಒತ್ತಟ್ಟಿಗೆ ಕಲೆಹಾಕಿ ಪ್ರಕಟಿಸಿದ "ಚೆನ್ನಪ್ಪ ಉತ್ತಂಗಿ"ಯವರು ಅವು ಪಂಚಮಾತ್ರಾ ಗಣಘಟಿತ ಎಂಬ ಭ್ರಮಗೆ ಒಳಗಾಗಿ, ಅವನ್ನು ಸಂಪೂರ್ಣವಾಗಿ ಪಂಚಮಾತ್ರಾಗಣಾತ್ಮಕವಾಗಿ ಮಾಡಿಬಿಟ್ಟಂತೆ ತೋರುತ್ತದೆ.

ಸರ್ವಜ್ಞನ ತ್ರಿಪದಿಗಳನ್ನು ಮಾತ್ರಾಗಣಗಳ ಕೃತಕ ರೂಪದಿಂದ ಅಂಶಗಳ ಸಹಜ ರೂಪಕ್ಕೆ ಹಿಂದಿರುಗಿಸುವುದು. ಇದು ಸುಲಭದ ಕೆಲಸವಲ್ಲ. ಈ ಹಿಂದೆಯೇ ಉದಾ ಹರಿಸಿರುವ ತುಂಬ ಪ್ರಸಿದ್ಧವಾದ, ಸಾಲ ಮತ್ತು ದೈವವನ್ನು ಕುರಿತ ಪದ್ಯಗಳಲ್ಲಿ ಮೂಲಭೂತವಾದ ಮಾರ್ಪಾಟುಗಳನ್ನು ಮಾಡದೆ, ಅವನ್ನು ಅಂಶಗಣಾತ್ಮಕವಾಗಿ ಮಾಡಬಹುದು.

ಸಾಲವ ಕೊಂಬಾಗ ಹಾಲೋಗರುಂಡಂತೆ
ಸಾಲಿಗ ಒಂದು ಎಳೆವಾಗ। ಕಿಬ್ಬದಿ
ಕೀಲ್ಮುರಿದಂತೆ ಸರ್ವಜ್ಞ

ಉತ್ತಂಗಿ ಚೆನ್ನಪ್ಪನವರು (ಅ) ಪಾರಮಾರ್ಥಿಕ ಪದ್ಯಗಳು ೧-೫೨೦, (ಆ) ನೈತಿಕಪದ್ಯಗಳು ೫೨೧-೧೪೨೭ ಮತ್ತು (ಇ) ಲೌಕಿಕ ಪದ್ಯಗಳು ೧೪೨೮-೧೯೨೮. ಹೀಗೆ ಪ್ರಮುಖವಾಗಿ ಮೂರು ಭಾಗಗಳಾಗಿ ವಿಂಗಡಿಸಿರುತ್ತಾರೆ. ಶುದ್ಧ ಪಾಠಗಳನ್ನನುಲಕ್ಷಿಸಿ ಗುರುಪದ್ಧತಿ, ಲಿಂಗಪದ್ಧತಿ, ಇಷ್ಟ ಲಿಂಗಪದ್ಧತಿ, ದೈವ ಪದ್ಧತಿ, ಭಕ್ತಪದ್ಧತಿ, ಜ್ಞಾನ ಪದ್ಧತಿ ಹೀಗೆ ಒಟ್ಟು ೩೨ ಪದ್ಧತಿಗಳನ್ನು ಗುರುತಿಸಿರುತ್ತಾರೆ, ಉತ್ತಂಗಿಯವರು.

ಭಕ್ತ ಸ್ಥಲಕ್ಕೆ ಉದಾ:- 1) ಗುರುಲಿಂಗ ಜಂಗಮವು । ಹರನೊಲಿದ ರೂಪೆಂದು।
ಅರಿದು ನಿಶ್ಚಯಿಸಿ ನಡೆಯುವ ಭಕ್ತಂಗೆ
ಪರಮ ಪದವಹುದು ಸರ್ವಜ್ಞ

ಬ್ರಹ್ಮ ಜ್ಞಾನಸ್ವರೂಪಲಕ್ಷಣ ನಿರಭಿಮಾನಿ ಉದಾ:-

2) ಬಲ್ಲೆನೆಂಬುವ ಮಾತು । ಎಲ್ಲವೂ ಹುಸಿಕಾಣೊ
ಬಲ್ಲರೆ ಬಲ್ಲೆನೆನಬೇಡ, ಸುಮ್ಮನಿರ।
ಬಲ್ಲವನೆ ಬಲ್ಲ । ಸರ್ವಜ್ಞ

"ಉತ್ತಂಗಿಯವರು ನಿಜ ಪದ್ಯಗಳನ್ನು ವಿವೇಕಿಸಿ ತಿಳಿಯುವುದು ದುಸ್ಸಾಧ್ಯವಾಗಿದ್ದರೂ ಒಂದು ತೆರದ ಸೂತ್ರವನ್ನನುಸರಿಸಿ ಇದನ್ನು ನಿಶ್ಚಯಿಸಿರುವೆವು. ವಿಶೇಷ ವಿರೂಪ ಹೊಂದದೆ ಕೈ ಬರಹದ ಹಾಗೂ ಅಚ್ಚಾದ ಎಲ್ಲಾ ಪತ್ರಗಳಲ್ಲಿ ದೊರೆಯುವವು ಕವಿಕೃತವೆಂದು ತಿಳಿಯಲ್ಪಟ್ಟಿವೆ"[6] ಎಂದಿದ್ದಾರೆ.

ಉತ್ತಂಗಿಯವರ ಪ್ರಕಾರ ___

| | |
|---|---|
| *. ಸರ್ವಜ್ಞ ಕೃತ ಪದ್ಯಗಳು | 1347 |
| + ಅನ್ಯಕೃತ ಪದ್ಯಗಳು | 538 |
| ‖ ಕಂಠಸ್ಥ ಹಾಗೂ ನವೀನ ಪದ್ಯಗಳು | 38 |
| (ಇದರಲ್ಲಿ ಸರ್ವಜ್ಞ ಕೃತವಾದವು ಕೆಲವಿರಬಹುದು) | |
| ? ಸಂಶಯಾತ್ಮಕ | 5 |
| ಒಟ್ಟು | 1928 |

ಉತ್ತಂಗಿ ಚೆನ್ನಪ್ಪನವರು ಸಂಪಾದಿಸಿ ಪ್ರಕಟಿಸಿರುವ ಮುದ್ರಣಗಳಲ್ಲಿ ಪದ್ಯಗಳ ಪ್ರತಿ ಸಾಲಿನ ಮುಂದುಗಡೆಯ ಅಂಕಿಗಳಲ್ಲಿ 'ಉ' ಸಂಕೇತಾಕ್ಷರ ೧೯೫೭ರ ಮುದ್ರಣದಲ್ಲಿಯ ಪದ್ಯ ಸಂಖ್ಯೆಯನ್ನೂ $ಉ_a$ 1935 ಮುದ್ರಣದಲ್ಲಿಯ ಪದ್ಯ ಸಂಖ್ಯೆಯನ್ನು ಸೂಚಿಸುತ್ತವೆ ಎಂದು ಸರ್ವಜ್ಞ ವಚನಗಳು ಎಂಬ ಕೃತಿಯನ್ನು ಸಂಪಾದಿಸಿರುವ ವಿ. ವೆಂಕಟರಾವ್ ಮತ್ತು ಗಣೇಶ್‌ರವರು ಹೇಳಿದ್ದಾರೆ.

೩

[13] "ಸರ್ವಜ್ಞ ನಿಟ್ಟ ಒಂದು ಹೆಜ್ಜೆ. ಅವನಾಡಿದ ಒಂದು ಮಾತು, ಹರಿಸಿದ ಕಣ್ಣೀರು, ಕಣ್ಣಿನಿಂದ ಸಿಡಿದ ಒಂದು ಕಿಡಿ, ಹಾಸ್ಯರಸಗೂಡಿದ ಒಂದು ನುಡಿ – ಎಲ್ಲವೂ ಜನ್ಮ ಭೂಮಿಗಾಗಿ, ಮಾನವ ಲೋಕದ ಉದ್ಧಾರಕ್ಕಾಗಿ"[7] ಇದು ಉತ್ತಂಗಿ ಚೆನ್ನಪ್ಪನವರಿಗೆ ಕಾಣಿಸಿಕೊಂಡ ಸರ್ವಜ್ಞ ಮೂರ್ತಿಯ ದಿವ್ಯ ಮೂರ್ತಿ, ಭವ್ಯ ಮೂರ್ತಿ. ಅಂತೆಯೇ ಉತ್ತಂಗಿಯವರಿಗೆ "ಸರ್ವಜ್ಞ ಸಾಹಿತಿ" ಎಂಬ ಅಭಿದಾನವಾಯಿತು. ಸರ್ವಜ್ಞ ಮೂರ್ತಿಸತ್ವವನ್ನು ಮಾತು ಮನಗಳಲ್ಲಿ ತುಂಬಿಕೊಂಡಿದ್ದರು ಉತ್ತಂಗಿ ಚನ್ನಪ್ಪನವರು.

ಈ ಕುಶಲ ಕರ್ಮದಲ್ಲ ಅವರಿಗೆ ಬೇಸರವಿಲ್ಲ. ಕೆಲಸ ಮುಗಿತೆಂಬುದೇ ಇಲ್ಲ. ತೃಪ್ತಿಯಿಲ್ಲದೆ ದುಡಿಯುವಲ್ಲಿ ಸತತ ನಿರತರಾಗಿರುತ್ತಿದ್ದರು. ವಚನಗಳ ಹತ್ತಾರು ಆವೃತ್ತಿಗಳಿಗೆ ಮುನ್ನುಡಿ, ಹಿನ್ನುಡಿಗಳನ್ನು, ಸಂದೇಶಗಳನ್ನು ಬರೆಯಿಸಿ ಪ್ರಕಟಗೊಳಿಸಿದರು. ಹೀಗೆ ಸರ್ವಜ್ಞ ಇವರಿಂದ ಬೆಳಕು ಕಾಣುವಂತಾಯಿತು. ಇವರು ಸಹ ಸರ್ವಜ್ಞನಿಂದ ಬೆಳಕನ್ನು ಕಂಡರು ಎನ್ನಬಹುದು.

"ಜ್ಞಾನದಿಂದಲಿ ಇಹವು । ಜ್ಞಾನದಿಂದಲಿ ಪರವು

ಜ್ಞಾನವಿಲ್ಲದಲೆ ಸಕಲವೂ ತನಗಿದ್ದು

ಹಾನಿ ಕಾಣಯ್ಯ ಸರ್ವಜ್ಞ"

"ಬಂಧುಗಳು ಆದವರು । ಬಂದುಂಡು ಹೋಗುವರು

ಬಂಧನವ ಕಳೆಯಲರಿಯರಾ ಗುರುವಿಂದ

ಬಂಧುಗಳು ಉಂಟೇ? ಸರ್ವಜ್ಞ"

"ಸಾಹಿತ್ಯ ರಂಗದಲ್ಲಿ ಉತ್ತಂಗಿ ಚೆನ್ನಪ್ಪನವರಿಗೆ ಶಾಶ್ವತವಾದ ಕೀರ್ತಿಯನ್ನು ತಂದು ಕೊಟ್ಟದ್ದು "ಸರ್ವಜ್ಞ ವಚನಗಳು" (1924) ಎಂಬ ಸಂಪಾದಿತ ಗ್ರಂಥ. ಸುಮಾರು 9 ವರ್ಷಗಳ ದೀರ್ಘಕಾಲ ಈ ವಚನಗಳನ್ನು ಪರಿಷ್ಕರಿಸಿದ್ಧಾರೆ. ಈ ಗ್ರಂಥ ಸಂಪಾದನಾ ಕಾರ್ಯಕ್ಕೆ ದುಡಿದ ಇವರು ಸುಮಾರು 2000 ವಚನಗಳನ್ನು ಪರಿಷ್ಕರಿಸಿದ್ದಾರೆ. ಈ ಗ್ರಂಥಕ್ಕೆ ಬರೆದಿರುವ 108 ಪುಟಗಳ ಉಪೋದ್ಘಾತದಲ್ಲಿ ಸರ್ವಜ್ಞನ ಪೂರ್ವೋತ್ತರ ಮತ್ತು ಅವನ ವ್ಯಕ್ತಿತ್ವ ಜನತೆಗೆ ತಿಳಿಯುವ ಹಾಗೆ ವಿವರಿಸಿದ್ದಾರೆ. ಸರ್ವಜ್ಞ ವಚನಗಳನ್ನು ಪಾರಮಾರ್ಥಿಕ, ಲೌಕಿಕ, ನೈತಿಕ, ವಿಚಾರಗಳೆಂದು ವಿಭಾಗಿಸಿ ಅಣಿಗೊಳಿಸಿದ್ದಾರೆ. ಈ ಕೃತಿ ಬಹುಬೇಗ ಜನಪ್ರಿಯವಾಗಿತು. ಆಗಿನ ಮೈಸೂರು ಸರ್ಕಾರ ಈ ಗ್ರಂಥದ ಸ್ವಾಮ್ಯವನ್ನು ಚೆನ್ನಪ್ಪನವರಿಂದ ಪಡೆದು, ಸುಲಭ ಬೆಲೆಯ  ಆವೃತ್ತಿಗಳ ಮಾಲೆಯಲ್ಲಿ ಪ್ರಕಟಿಸಿತು. ಈ ಗ್ರಂಥ 18 ಪುಟಗಳ ಲಘು ಟಿಪ್ಪಣಿ, 130 ಪುಟಗಳ ವಿಶೇಷ ಟಿಪ್ಪಣಿ ಮತ್ತು ಸರ್ವಜ್ಞ ವಚನಗಳ ಅಕಾರಾದಿಯನ್ನು ಒಳಗೊಂಡಿದೆ. ಸಾಹಿತ್ಯ ಆವೃತ್ತಿ(1924), ಜೇಬಿನ ಆವೃತ್ತಿ (1935), ಜನಪದ ಆವೃತ್ತಿ (1935), ಅಗ್ಗದ ಆವೃತ್ತಿ (1941) – ಹೀಗೆ ನಾಲ್ಕು ಆವೃತ್ತಿಗಳಲ್ಲಿ ಪ್ರಕಟಗೊಂಡಿರುವ ಏಕೈಕ ಗ್ರಂಥವಿದು."

೧೯೨೪ರ ಆವೃತ್ತಿಯ ಬಗೆಗೆ ವಿಮರ್ಶಿಸಿರುವ "ಎಂ. ಆರ್. ಶ್ರೀನಿವಾಸಮೂರ್ತಿ ಅವರು ಚನ್ನಪ್ಪ ಉತ್ತಂಗಿಯವರು ಈ ಕಾರ್ಯಕ್ಕಾಗಿ ಎಷ್ಟು ಶ್ರಮವಹಿಸಿರುವರೆಂಬುದನ್ನು ಬರಿಯ ಬಾಯಿ ಮಾತಿನಲ್ಲಿ ಹೇಳಲಾಗುವುದಿಲ್ಲ. ಅವರ ಶ್ರಮವನ್ನು ಯಾರಾದರೂ ಸರಿಯಾಗಿ ಬೆಲೆ ಕಟ್ಟಬೇಕಾದರೆ ಆ ಪುಸ್ತಕವನ್ನು ತೆಗೆದುಕೊಂಡು ಆಮೂಲಾಗ್ರವಾಗಿ ಓದಬೇಕು. ಆಗ ಅವರು ಆಶ್ಚರ್ಯದಿಂದ ಸ್ತಬ್ಧರಾಗುವುದಲ್ಲಿ ಸಂದೇಹವಿಲ್ಲ." ಎಂದಿರುವ ಮಾತುಗಳು ಈ ಕಾರ್ಯವನ್ನು ಮಾಡಿದ ಮಹನೀಯರ ಬಗೆಗೆ ವಸ್ತುಸ್ಥಿತಿಯನ್ನು ಸ್ಥಿರಪಡಿಸುತ್ತದೆ.

ಚನ್ನಪ್ಪ ಉತ್ತಂಗಿಯವರ ಮಹತ್ಸಾಧನೆಗೆ ಅವರ ೧೦೭ ಪುಟಗಳಷ್ಟು ವಿಸ್ತಾರವಾದ ಅವರ ಉಪೋದ್ಘಾತವೇ ಸಾಕ್ಷಿ. ಚನ್ನಪ್ಪ ಉತ್ತಂಗಿಯವರು ಪ್ರಪಂಚದ ಸರ್ವ ಧರ್ಮಗಳ ತಿರುಳನ್ನು ಅರಿತುಕೊಂಡಿದ್ದರೆಂಬುದರಲ್ಲಿ ಎರಡು ಮಾತಿಲ್ಲ. ಚನ್ನಪ್ಪ ಉತ್ತಂಗಿಯವರು ಚರಿತ್ರೆಯಲ್ಲಿ ನಾವು ಕಾಣುವುದು ಚಿತ್ರಕಲೆಯಲ್ಲ – ಚಿತ್ತಕಲೆ. ಚನ್ನಪ್ಪ ಉತ್ತಂಗಿಯವರ ಸಂಶೋಧನಾ ಕಿರೀಟದಲ್ಲಿ ಸರ್ವಜ್ಞನು ಬಣ್ಣದ ತುರಾಯಿಯಂತೆ ಕಂಗೊಳಿಸುತ್ತಾನೆಂದು ಹೇಳಬಹುದು.

## 2) ಡಾ॥ ಎಲ್. ಬಸವರಾಜು



ಡಾ॥ ಎಲ್. ಬಸವರಾಜು

ಎಲ್. ಬಸವರಾಜು ಅವರು ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಇಡಗೂರು ಎಂಬ ಗ್ರಾಮದಲ್ಲಿ ೧೯೧೯ರಲ್ಲಿ ಜನಿಸಿದರು. ಎಲ್. ಬಸವರಾಜು ಅವರು ಕನ್ನಡದ ಗಣ್ಯ ಪ್ರಾಧ್ಯಾಪಕರಲ್ಲಿ ಒಬ್ಬರು. ಸಂಶೋಧನೆ, ಗ್ರಂಥ ಸಂಪಾದನೆ ಹಾಗೂ ಸಾಹಿತ್ಯ ವಿಮರ್ಶೆ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಯನ್ನು ಮಾಡಿದ ಅವರು ಬಹುಶ್ರುತ ವಿದ್ವಾಂಸರು. ವಚನ ಸಾಹಿತ್ಯ ಹಾಗೂ ಶಾಸ್ತ್ರ ಗ್ರಂಥಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದ್ದು ಅವರ ಮಹತ್ವದ ಕಾರ್ಯವಾಗಿದೆ. ಕನ್ನಡ ಗ್ರಂಥ ಸಂಪಾದನಾ ಸಾಹಿತ್ಯ ಕ್ಷೇತ್ರದಲ್ಲಿ ಅವರು ನಡೆಸಿದ ಸಂಶೋಧನೆ ತುಂಬ ಮೌಲಿಕವಾದುದಾಗಿದೆ. ಎಲ್. ಬಸವರಾಜುರವರು ಸರಳ ಮತ್ತು ಸರಸ ಸ್ವಭಾವದವರು. ಮಾತು ನೇರ. ನುಡಿದಂತೆ ನಡೆಯುವ, ನಡೆದಂತೆ ನುಡಿಯುವ ನಿರ್ಭಿತ ಸ್ವಭಾವದ ಅವರು ಯಾರ ಮುಲಾಜಿಗೂ ಒಳಗಾಗುವವರಲ್ಲ. “ಸಾದಾ ಜೀವನ, ಉಚ್ಚ ವಿಚಾರ” ವೆನ್ನುವ ಉಕ್ತಿ ಬಸವರಾಜು ಅವರಿಗೆ ಒಪ್ಪುವಂಥದು.

೨

ಉತ್ತಂಗಿ ಚೆನ್ನಪ್ಪನವರ ತರುವಾಯ ಕವಿ ಸರ್ವಜ್ಞನ ವಚನಗಳ ಸಂಗ್ರಹಣ, ಪರಿಷ್ಕರಣ ಮತ್ತು ಪ್ರಕಾಶನಕ್ಕೆ ಮೊತ್ತ ಮೊದಲಿಗೆ ಕೈಹಾಕಿದವರು ಎಲ್.ಬಸವರಾಜು. ಅವರು ೧೯೮೦ ರಲ್ಲಿ ಬೆಂಗಳೂರು ವಿಶ್ವ ವಿದ್ಯಾನಿಲಯದಿಂದ ಪ್ರಕಾಶಿತವಾಗಿರುವ ೧೦೦೨ ತ್ರಿಪದಿಗಳನ್ನುಳ್ಳ 'ಪರಮಾರ್ಥ' ಎಂಬ ಸರ್ವಜ್ಞ ವಚನಗಳ ಕೃತಿಯನ್ನು ಬಸವರಾಜು ಅವರು ಪರಿಷ್ಕರಿಸಿದ್ದಾರೆ. ಇದರ ಸಂಪಾದನೆಗೆ ದೊರೆತ ಹಸ್ತ ಪ್ರತಿಗಳ ಜತೆಗೆ ೧೬ ಅಚ್ಚಿನ ಪ್ರತಿಗಳನ್ನು ಬಳಸಿಕೊಂಡಿದ್ದಾರೆ. ವಚನಗಳನ್ನು ೨೨ ಪದ್ದತಿಗಳನ್ನಾಗಿ ವಿಂಗಡಿಸಲಾಗಿದೆ. ಪಾಠಾಂತರಗಳಿಗೆ ಸಂಕೇತಗಳಾಗಿ ಪ್ರತಿಗಳ ಸಂಖ್ಯೆಗಳನ್ನೇ ನೀಡಲಾಗಿದೆ.

'ಪರಮಾರ್ಥ' ಎಂಬ ಅಂಕಿತದ ವಿಚಾರವಾಗಿ 'ಪರಮಾರ್ಥ' ಗ್ರಂಥವನ್ನು ಪ್ರಕಟಿಸಿ ಆಹೆಸರಿಗೇ ಮಹತ್ವಕೊಟ್ಟಿರುವ ಹಿರಿಯ ಸಂಶೋಧಕರಲ್ಲೊಬ್ಬರಾದ ಡಾ॥ ಎಲ್. ಬಸವರಾಜು ಅವರ ಮಾತುಗಳು ಇಂತಿವೆ. "ಸರ್ವಜ್ಞನ ವಚನಗಳ ಸುಧಾರಿತ ಪರಿಷ್ಕರಣವೊಂದನ್ನು ತರಬೇಕೆಂದು ನಾನು ಸಂಕಲ್ಪಿಸಿದೆ. ಆ ಪ್ರತಿಗಳಲ್ಲಿ ವೆಂಕನೆಂಬುವನು ಕ್ರಿ. ಶ. ೭-೩-೧೬೩೬ ರಲ್ಲಿ ನಕಲು ಮಾಡಿಕೊಂಡಿದ್ದ ಒಂದು ಓಲೆಯ ಗ್ರಂಥ ದೊರೆತುದರಿಂದ ನನ್ನ ಸಂಪಾದನ ಕಾರ್ಯಕ್ಕೆ ವಿಶ್ವಾಸಾರ್ಹವಾದೊಂದು ಪ್ರಾಚೀನತಮ ಆಧಾರ ಲಭಿಸಿದಂತಾಯಿತು. ಅಲ್ಲಿನ ತಪ್ಪುಗಳನ್ನು ತಿದ್ದಲು ಅದೇ ಸಂಪ್ರದಾಯಕ್ಕೆ ಸೇರಿದ ಮತ್ತೆ ಕೆಲವು ಪ್ರತಿಗಳೂ ಲಭ್ಯವಾದುದು ನನ್ನ ಪುಣ್ಯವಷ್ಟೇ ಅಲ್ಲ, ಕನ್ನಡ ನಾಡಿನ ಪುಣ್ಯವೆಂದೇ ಹೇಳಬೇಕು ಎಂದಿದ್ದಾರೆ ಎಲ್. ಬಸವರಾಜು ಅವರು.

ಆ ಪ್ರಾಚೀನತಮ ಪ್ರತಿಯಲ್ಲಿ ಸಿಕ್ಕಿದ ೯೩೭ ವಚನಗಳನ್ನು ನಾನು ನಿಜವಚನಗಳೆಂದು ಗಣನೆಮಾಡಿ ಮತ್ತು ಅಲ್ಲಿ ಆ ವಚನಗಳನ್ನು ಇಡಿಯಾಗಿ 'ಪರಮಾರ್ಥ' ವೆಂದು ಕರೆದಿರುವುದನ್ನು ಗಮನಿಸಿ ಈ ಗ್ರಂಥಕ್ಕೆ 'ಪರಮಾರ್ಥ' ಎಂದೇ ಹೆಸರಿಟ್ಟೆ . ಇದು ಸರ್ವಜ್ಞನ ಕೃತಿ ಸಮಷ್ಟಿಗೆ ಅನ್ವಯಿಸುವ ಏಕೈಕ ನಾಮಧೇಯವಾಗಿದೆ.

ಸರ್ವಜ್ಞನ ತ್ರಿಪದಿಗಳ ಅಂಕಿತದ ಸಂಬಂಧವಾಗಿಯೇ ಎರಡು ಪಾಠ ಸಂಪ್ರದಾಯಗಳಿವೆ. ಒಂದರ ಪ್ರಕಾರ 'ಸರ್ವಜ್ಞ' ಎಂಬುದು ಅಂಕಿತ; ಇನ್ನೊಂದುರ ಪ್ರಕಾರ 'ಪರಮಾರ್ಥ'. ಈಚೆಗೆ (1972) ಡಾ॥ ಎಲ್. ಬಸವರಾಜು ಅವರು ಅತ್ಯಂತ ಪ್ರಾಚೀನವಾದ ಒಂದು ಓಲೆಗರಿಯ ಹಸ್ತ ಪ್ರತಿಯ ಆಧಾರದ ಮೇಲೆ 'ಪರಮಾರ್ಥ' ಎಂಬ ಅಂಕಿತವನ್ನೇ ಸ್ವೀಕರಿಸಿ, ತಮ್ಮ ಪರಿಷ್ಕೃತ ಮುದ್ರಣವನ್ನು 'ಪರಮಾರ್ಥ'

ಎಂದೇ ಹೆಸರಿಸಿದ್ದಾರೆ."[8] ಡಾ॥ ಬಸವರಾಜು ಅವರು 'ಪರಮಾರ್ಥ' ಎಂಬ ಗ್ರಂಥದಲ್ಲಿ ೨೨ ಪದ್ಧತಿಗಳನ್ನಾಗಿ ವಿಂಗಡಿಸಿದ್ದಾರೆ.

ಉದಾ: 'ಜಾತಿ ಸ್ಮರಣ ಪದ್ಧತಿ': ಅಂಬಲೂರೊಳಗೆಸೆವ । ಕುಂಬಾರ ಸಾಲೆಯಲಿ

ಇಂಬನ ಕಳೆ [ಯ] ಮಾಳಿಯೊಳು–ಬಸವರಸ

ನಿಂಬಿಟ್ಟನೆನ್ನ ಪರಮಾರ್ಥ.

ಗುರು ಕರುಣ ಪದ್ಧತಿ : ನರಕ ಪಾಪಿಷ್ಟರಿಗೆ । ಸುರಲೋಕ [ದಿಟ್ಟರಿಗೆ]

ಗುರುಬೋಧೆಯಲ್ಲಿ ಜಗ ಉಳಿಗುಮಲ್ಲದೊಡೆ

ಉರಿದು ಹೋಗುವುದು ಪರಮಾರ್ಥ.

ಜ್ಞಾನಪದ್ಧತಿ : ಆನೆಮುಕುರುದೊಳಡಗಿ । ಭಾನು ಸರಸಿಯೊಳಡಗಿ

ನಾನೆನ್ನ ಗುರುವಿನೊಳಡಗಿ – ಸಂಸಾರ

ತಾನದೆತ್ತಣದು ಪರಮಾರ್ಥ.

'ಪರಮಾರ್ಥ' ಎಂಬ ಕೃತಿಯಲ್ಲಿ ಎಲ್. ಬಸವರಾಜು ಅವರು ಸರ್ವಜ್ಞನ ಹೆಸರಿನಲ್ಲಿ ಹೆಚ್ಚಿರುವ ವಚನಗಳೆಂದು ಕೆಲವೊಂದನ್ನು ಆಯ್ದು ಪರಿಷ್ಕರಿಸಿ ಪ್ರಕಟಿಸಿದ್ದಾರೆ.

೧. ಸಂಪಾದನೆಯ ಸಿದ್ಧವೀರಣಾಚಾರ್ಯನ ಸಂಕಲನದಿಂದ ಆಯ್ದಿರುವ ವಚನಗಳು:

ಉದಾ: ೧. ಮಂಡೆ ಬೋಳಿಸಿಕೊಂಡು । ತುಂಡುಗಂಬಳಿ ಹೊದ್ದು

ಹಿಂಡನಗಲಿದ ಮದಗಜು – ದಂತಿಹರ

ಕಂಡು ನಂಬುವುದು ಸರ್ವಜ್ಞ.

೨. ಭಿಕ್ಷದ ಅನ್ನವು ಮೋಕ್ಷಕ್ಕೆ ಸಾಧನವು

ಕುಷಿಗೆ ನರರ ಕಾಡಿ ಬೇಡುಂಬನ್ನ

ಮೋಕ್ಷಕ್ಕೆ ದೂರ ಸರ್ವಜ್ಞ.

ಎಲ್. ಬಸವರಾಜು ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳಲ್ಲಿ ಕೆಳದಿ ಮ್ಯುಸಿಯಂನಲ್ಲಿ ದೊರೆತ ಹಸ್ತ ಪ್ರತಿಯಲ್ಲೂ 'ಱ' ಕಾರ ಪ್ರಯೋಗವಿದೆ. ಆದ್ದರಿಂದ 'ೞ' ಕಾರ ಪ್ರಯೋಗವು ಇನ್ನೂ ಪ್ರಚುರತೆಯಲ್ಲಿದ್ದ ಕಾಲದಲ್ಲಿ ಸರ್ವಜ್ಞ ವಚನಗಳ ಪ್ರಪ್ರಾಚೀನ ಹಸ್ತ ಪ್ರತಿಗಳು ಹುಟ್ಟಿವೆ ಎಂದಾಯಿತು. ಬಸವರಾಜು ಅವರು 'ಪರಮಾರ್ಥ' ಅಂಕಿತವನ್ನು ಸಮರ್ಥಿಸುವ ಸಂಬಂಧದಲ್ಲಿ "ಸರ್ವಜ್ಞ ಎಂಬುದು ತ್ರಿಪದಿಯ ಕೊನೆಯ ಗಣಸ್ಥಾನದಲ್ಲಿ ಛಂದಸ್ಸಿನ ದೃಷ್ಟಿಯಿಂದ ('ಸರುವಜ್ಞ' ಎಂದಾದ ಹೊರತು)

ಹೊಂದುವುದಿಲ್ಲವೆಂಬುವುದನ್ನು ವಿದ್ವಾಂಸರು ಗಮನಿಸಿರುವಂತಿಲ್ಲ" ಎಂದು ಹೇಳಿ, ತಾವು ಗುರುತಿಸಿದ ಛಂದಸ್ಸಿನ ಬಗೆಗೆ ಗಮನ ಸೆಳೆದಿದ್ದಾರೆ.

೩

ಡಾ॥ ಬಸವರಾಜು ಅವರು 'ಪರಮಾರ್ಥ'ದ ಪಾಠವನ್ನು ಓದುಗರ ಮುಂದಿಡುವಾಗ ಪ್ರತಿ ಪದ್ಯದ ಅಡಿಯಲ್ಲಿಯೂ ಉಪಲಬ್ಧವಿರುವ ಸರ್ವಪಾಠಗಳನ್ನು ಸಂಗ್ರಹಿಸಿ ಒಂದು ದೊಡ್ಡ ಉಪಕಾರ ಮಾಡಿದ್ದಾರೆ. ಪರಮಾರ್ಥದ ಪಾಠವೇ ಪರಮಸತ್ಯ ಎಂದು ನೆರೆನಂಬಿ ಅವರು ಪರಿಷ್ಕರಣ ಕಾರ್ಯದಲ್ಲಿ ಹೊಲಬು ತಪ್ಪಿದರು ಎಂದು ನಮಗೆ ತೋರುತ್ತದೆ.

ಉದಾಹರಣೆಗೆ, ಒಂದು ಪದ್ಯ:

"ಮಂಡೆ ಬೋಳಾದೊಡಂ 'ದಂಡು' ಕೋಲ್ವಿಡಿದೊಡಂ
ಹೆಂಡತಿಯ ಬಿಟ್ಟು ನಡೆದೊಡಂ ಗುರುಮುಖವ
ಕಂಡಲ್ಲದಿಲ್ಲ ಪರಮಾರ್ಥ (38)."

'ದಂಡು' ಎಂಬ ಪದಕ್ಕೆ ಒಂದು ಹಸ್ತ ಪ್ರತಿಯಲ್ಲಿ 'ದಂಡಿ' ಎಂದೂ 'ವಿರ್ಥ್' ಮತ್ತು 'ಉತ್ತಂಗಿ'ಯವರ ಮುದ್ರಿತ ಪಾಠಗಳಲ್ಲಿ 'ದಂಡ' ಎಂದು ಇವೆ. ('ಪರಮಾರ್ಥ', 1980,ಪು,14). 'ದಂಡಿ' ಎಂಬ ಪಾಠವೆ ಸರಿಯಾದ ಪಾಠ; ದಂಡವೂ ಆಗಬಹುದು. ಸಂನ್ಯಾಸಿಗಳಲ್ಲಿ 'ಏಕದಂಡಿ' ಸನ್ಯಾಸಿಗಳು 'ತ್ರಿದಂಡಿಗಳು' ಎಂಬ ಭೇದಗಳುಂಟು. ಆದ್ದರಿಂದ, 'ದಂಡಿ' ಎಂಬ ಪಾಠವೇ ಸರಿಯಾದದ್ದು; ಹಾಗೂ ಮೂಲಪಾಠ. ಹೀಗಿರುವಾಗ, ಪರಮಾರ್ಥದ ಪಾಠವೇ ಮೂಲಪಾಠ ಎಂದು ಪಟ್ಟು ಹಿಡಿಯುವುದು ಉಚಿತವೆನಿಸದು.

ಡಾ॥ ಎಲ್. ಬಸವರಾಜು ಅವರು ಕ್ರಿ. ಶ. ೧೬೩೬ ರಲ್ಲಿ ವೆಂಕ ಎಂಬುವವನು ನಕಲು ಮಾಡಿದ್ದ ಓಲೆ ಪ್ರತಿಯ ಆಧಾರದ ಮೇಲೆ ಇದುವರೆಗೆ ಬಳಸಲಾಗಿದ್ದ 'ಸರ್ವಜ್ಞ' ಎಂಬುವುದಕ್ಕೆ ಬದಲಾಗಿ 'ಪರಮಾರ್ಥ' ಎಂಬ ಹೆಸರಿನ್ನಿಟ್ಟಿದ್ದಾರೆ. ಇದರಿಂದ ಸರ್ವಜ್ಞನ ವಚನಗಳು ಪರಮಾರ್ಥದ ವಚನಗಳಾದವು. ದೊರೆಯುವ ಎಲ್ಲ ಹಸ್ತಪ್ರತಿಗಳ ತುಲನಾತ್ಮಕ ದೃಷ್ಟಿಯಿಂದ ಪರಿಷ್ಕರಣ ಮಾಡಬೇಕಾದುದು ಅತ್ಯಂತ ಸೂಕ್ತ ಮಾರ್ಗವಾಗಿದೆ. ಹಲವಾರು ಹಸ್ತ ಪ್ರತಿಗಳಲ್ಲಿರುವ 'ಸರ್ವಜ್ಞ' ಅಂಕಿತವನ್ನು ಬಿಟ್ಟು ಯಾವುದೋ ಒಂದು ಹಸ್ತ ಪ್ರತಿಯಲ್ಲಿರುವುದನ್ನು ಅಂಗೀಕರಿಸುವುದು ಸಮರ್ಥನೀಯವಲ್ಲ. ಆದರೆ 'ಪರಮಾರ್ಥ'ದ ಹಸ್ತ ಪ್ರತಿಯನ್ನು ಬಿಟ್ಟು ಉಳಿದ ಎಲ್ಲ ಹಸ್ತ ಪ್ರತಿಗಳಲ್ಲಿ 'ಸರ್ವಜ್ಞ' ಎಂಬ ಅಂಕಿತವಿರುವುದು ನಮಗೆ ತಿಳಿದುಬಂದಿರುವ ಸಂಗತಿ. ಈ ಬಹುಸಂಖ್ಯೆ ಇಂದಿನ

ಪ್ರಜಾಪ್ರಭುತ್ವದ ರಾಜಕೀಯದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಬಹುದೇ ಹೊರತು ಗ್ರಂಥ ಸಂಪಾದನೆಯಂಥ ಶಾಸ್ತ್ರ ಪ್ರಪಂಚದಲ್ಲಿ ಅಲ್ಲ. ಒಂದೇ ಒಂದು ಹಸ್ತ ಪ್ರತಿ ಕವಿ ಪಾಠವನ್ನು ಉಳಿಸಿಕೊಂಡು ಬಂದಿರುವ ಸಾಧ್ಯತೆ ಉಂಟು. ಹೀಗಿರುವಲ್ಲಿ ಯಾವ ಅಂಕಿತ ಸರಿ ಎಂದು ನಿರ್ಣಯಿಸುವಾಗ ವಿಚಾರದ ಒರೆಗಲ್ಲನ್ನು ಉಪಯೋಗಿಸಬೇಕು.

ಉತ್ತಂಗಿ ಚೆನ್ನಪ್ಪರವರು ಸಂಪಾದಿಸಿದ, ಪ್ರಕಟಿಸಿದ ಸರ್ವಜ್ಞನ ವಚನಗಳಲ್ಲಿ ಎಷ್ಟೋ ಪ್ರಕ್ಷಿಪ್ತವಿದೆಯೆಂಬುದನ್ನು ಮೊದಲ ಬಾರಿಗೆ ಸಾಧಾರಣವಾಗಿ ಎತ್ತಿ ತೋರಿಸುವ ಮೂಲಕ ಸರ್ವಜ್ಞನ ವಚನಗಳ ಶಾಸ್ತ್ರೀಯ ಅಧ್ಯಯನಕ್ಕೆ ಪೀಠಿಕೆ ಹಾಕಿದ್ದಾರೆ. “ಆನೆ ನಡೆದುದೇ ಮಾರ್ಗ” ಎನ್ನುವಂತೆ ಇವರು ಏಕಾಂಗವೀರರಾಗಿ ಒಂದು ಸಂಸ್ಥೆ ಮಾಡುವಷ್ಟು ಕೆಲಸವನ್ನು ಈ ಕ್ಷೇತ್ರದಲ್ಲಿ ಮಾಡಿದ್ದಾರೆ. ಕನ್ನಡ ಸಂಶೋಧನಾ ಕ್ಷೇತ್ರಕ್ಕೆ ಇವರ ಕೊಡುಗೆ ಇಂಥ ಕೃತಿಗಳಿಂದ ಅಮೂಲ್ಯವೆನ್ನಿಸಿದೆ. ಸರ್ವಜ್ಞನ ವಚನಗಳು ‘ಸರ್ವಜ್ಞ’ ಅಂಕಿತದೊಂದಿಗೆ ಹೆಚ್ಚು ಪ್ರಚಾರ ಪಡೆದುದರಿಂದ ಮತ್ತು ‘ಪರಮಾರ್ಥ’ ಅಂಕಿತಕ್ಕೆ ಬೇರೆ ವಿದ್ವಾಂಸರ ಸಮ್ಮತಿ ದೊರೆಯದ್ದರಿಂದ ಹಾಗೂ ಹೆಚ್ಚಿನ ಹಸ್ತ ಪ್ರತಿಗಳಲ್ಲಿ ‘ಸರ್ವಜ್ಞ’ ಅಂಕಿತವೇ ಇರುವುದರಿಂದ ಅವರು ‘ಪರಮಾರ್ಥ’ ಶೀರ್ಷಿಕೆಯನ್ನು ಮುಂದಿನ ಆವೃತ್ತಿಯಲ್ಲಿ ಕೈ ಬಿಟ್ಟು “ಸರ್ವಜ್ಞನ ವಚನಗಳು” ಶೀರ್ಷಿಕೆಯಲ್ಲಿಯೇ ಪ್ರಕಟಿಸಿದರು.

ಸರ್ವಜ್ಞನ ವಚನಗಳನ್ನು ತಳ ಸೋಸಿ ಅಧ್ಯಯನ ನಡೆಸಿ ಶಾಸ್ತ್ರೀಯವಾಗಿ ಮೊದಲು ಸಂಪಾದಿಸಿ ಪ್ರಕಟಿಸಿದವರು ಉತ್ತಂಗಿ ಚೆನ್ನಪ್ಪನವರು. ಅನಂತರ ಆತನ ವಚನಗಳನ್ನು ವಿಷಯಾನುಸಾರವಾಗಿ ವಿಂಗಡಿಸಿ ಕೊಡುವುದರ ಜೊತೆಗೆ ಚೆನ್ನಪ್ಪನವರಿಗಿಂತಲೂ ಹೆಚ್ಚು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದವರು ಎಲ್. ಬಸವರಾಜು ಎಂಬುವುದರಲ್ಲಿ ಅತಿಶಯೋಕ್ತಿಯಿಲ್ಲ

೪



ಸಂಪಾದನೆಯ ಗೂಳೂರು ಸಿದ್ಧವೀರಣ್ಣಾಚಾರ್ಯನು ಸರ್ವಜ್ಞನ ಕೆಲವು ಯಥೋಕ್ತಿಗಳನ್ನು ಉಲ್ಲೇಖಿಸಿದ್ದು, ಇವನು ಸುಮಾರು ೧೬೦೦ರಲ್ಲಿದ್ದಂತೆ ತೋರುತ್ತದೆ. ಸಂಪಾದನೆಯ ಸಿದ್ಧವೀರಣ್ಣಾಚಾರ್ಯರು ಸೇರಿಸಿದ ಸರ್ವಜ್ಞ ತ್ರಿಪದಿಗಳು, ಪದಗಳ ಸಂಖ್ಯೆ ೨೬೪. ಇವು ಸಾಧಾರಣವಾಗಿ ಸರ್ವಜ್ಞನ ಮೂರ್ತಿತ್ವವನ್ನು ಕುರಿತಿರುವ ಪದ್ಯಗಳೇ ಹೆಚ್ಚು, ಜಿ.ಎಂ. ಉಮಾಪತಿಶಾಸ್ತ್ರಿ, ಅವರು ಸಂಪಾದಿಸಿರುವ ಸಂಪಾದನೆಯ ಸಿದ್ಧ ವೀರಣ್ಣೊಡೆಯ ದೇವರು ಸೇರಿಸಿದ ‘ಆಚರಣೆಯ ಸಂಬಂಧದ ತ್ರಿವಿಧಿ’ ಯನ್ನು ಬಾಗಲಕೋಟೆ ಶಾರದಾಭವನ ಪ್ರಕಾಶನವು ೧೯೭೨ರಲ್ಲಿ ಪ್ರಕಟಿಸಿದೆ. ಗೂಳೂರು

ಸಿದ್ಧವೀರಣ್ಣೊಡೆಯನಿಂದ ಹಿಡಿದು ಇತ್ತೀಚಿನ ರುದ್ರಮೂರ್ತಿಶಾಸ್ತ್ರಿ, ಕೆ.ಆರ್.ಗಣೇಶ್ ಮೊದಲಾದವರು ಸರ್ವಜ್ಞನ ತ್ರಿಪದಿಗಳನ್ನು ಪ್ರಕಟಿಸಿದ ರೀತಿಯು ಬಹಳ ಮಹತ್ವಪೂರ್ಣವಾದದ್ದು ಎನಿಸಿದೆ.

೫

## ಡಾ. ಎಂ.ಎಂ.ಕಲಬುರ್ಗಿಯವರ ಸರ್ವಜ್ಞನ ತ್ರಿಪದಿಗಳ ಸಂಪಾದನೆ:

ಡಾ. ಕಲಬುರ್ಗಿ ಅವರು ಈ ಕೆಳಕಂಡ ತ್ರಿಪದಿಗಳನ್ನು ಉಹಾತ್ಮಕ ಪರಿಷ್ಕಾರಣಕ್ಕೆ ಉದಾಹರಣೆಯಾಗಿ ತೆಗೆದುಕೊಂಡಿದ್ದಾರೆ.

೧. ತುಯ್ಯಲಿಲ್ಲದ ತೋಟ । ತುಯ್ಯಲಿಲ್ಲದ ಊಟ।
ಕೈಯಲಿಲ್ಲದನ ಬರಿನೋಟ । ಕೋಲಿರದೆ ।
ಹುಯ್ಯಲ್ಹೋದಂತೆ ಸರ್ವಜ್ಞ ॥*

ಇಲ್ಲಿ 'ತುಯ್ಯಲಿಲ್ಲದ ಊಟ' ಕ್ಕೆ ಅರ್ಥಹೇಳಬಹುದು. ಆದರೆ 'ತ್ಯುಯಲಿಲ್ಲದ ತೋಟಕ್ಕೆ ಅರ್ಥವೇನು ? ನೀರಿನಿಂದ ತೊಯ್ಯದ ತೋಟ ಎಂಬ ಅರ್ಥ, ಈ ಪದದಿಂದ ಬಹುಶಃ ಹೊರಡಲಿಕ್ಕಿಲ್ಲ. ಅದಕ್ಕಾಗಿ ಬಾವಿ ಅರ್ಥದ 'ಗುಯ್ಯಲ್' ಯೋಗ್ಯವಾದ ಪಾಠವೆಂದು ಡಾ॥ ಚಿದಾನಂದ ಮೂರ್ತಿಗಳ ಮತ. ಭಾವಿಯಿದ್ದರೆ ಮಾತ್ರ ತೋಟವೆನಿಸುವುದರಿಂದ ಅವರ ಪಾಠ ಅಷ್ಟುಸರಿಯಿನಿಸದು. ಬಹುಶಃ ಪೈರು ಅರ್ಥದ 'ಕುಯ್ಯಲ್' ನಿಜ ಪಾಠವಾಗಿರಬಹುದು. ಕ ತಗಳ ಅಕ್ಷರ ಸಾದೃಶ್ಯವೂ ಇದನ್ನು ಬೆಂಬಲಿಸುತ್ತದೆ. 'ಪೈರಿಲ್ಲದ ತೋಟ' ಎಂಬ ಯೋಗ್ಯ ಅರ್ಥವೂ ಹೊರಡುತ್ತದೆ. ಇಲ್ಲಿ ಅಕ್ಷರ ಸಾದೃಶ್ಯವಿಲ್ಲದ ಡಾ॥ ಚಿದಾನಂದ ಮೂರ್ತಿಗಳ ಪಾಠ ಊಹಾತ್ಮಕ ಪರಿಕ್ಷರಣ, ನಮ್ಮದು ಪರಿಷ್ಕರಣ ಎಂದಿದ್ದಾರೆ.

೨. ತಿಂದು ಗಾದೆಯ ಮೇಲೆ । ಬಂದು ಗುರು ಬೀಳ್ವಂತೆ ।
ಬಂದ ಪ್ರಸ್ತಾಪಕ್ಕೊದಗಿದ । ರಾ ಮಾತ ।
ನೊಂದೆನ್ನಬಹುದೆ ಸರ್ವಜ್ಞ ।[2]

ಒಂದೂ ಭಿನ್ನ ಪಾಠವಿಲ್ಲದ ತ್ರಿಪದಿಯಿದು. ಸಮಯೋಚಿತ ಮಾತಿನ ಮಹತ್ವವನ್ನು ಹೇಳುವಲ್ಲಿ ಬಳಸಿದ " ತಿಂದು ಗಾದೆಯ ಮೇಲೆ ಬಂದು ಗುರು ಬೀಳ್ವಂತೆ" ಎಂಬ ಉಪಮೆಯ ಔಚಿತ್ಯ ಸ್ಪಷ್ಟವಾಗುವುದಿಲ್ಲ.

---

* ರೆವೆರೆಂಡ್ ಚೆನ್ನಪ್ಪ ಉತ್ತಂಗಿ ಜೀವನ ಹಾಗೂ ಕೃತಿಗಳು : ಪುಟ ೫೬

*2. ಎಂ. ಎಂ. ಕಲಬುರ್ಗಿ: ಕನ್ನಡ ಗ್ರಂಥ ಸಂಪಾದನಾಶಾಸ್ತ್ರ, ಪುಟ 162.

ತಿಂಬ ಗಂದೆ ಎಂದರೆ ' ನವೆಯಾಗುತ್ತಿರುವ ಹುಣ್ಣು' ಎಂದು ಅರ್ಥವಾಗುತ್ತದೆ. ಅದಕ್ಕೆ ಅಲ್ಲಮ / ಬಸವಣ್ಣನ ವಚನಗಳು ಬರುವ 'ತಿಂಬ ಗಂದೆಯ ಮೇಲೆ ಬಿದ್ದಂತಾಯ್ತು ಎಂಬುದು. ಅನ್ಯ ಸಾಕ್ಷಿಯಾಗುತ್ತದೆ. ಆದ್ದರಿಂದ 'ತಿಂಬ ಗಂದೆಯ ಮೇಲೆ ಒಂದುಗುರು ಬಿದ್ದಂತೆ' ಎಂಬ ಪಾಠ ಉಚಿತವಾದ ಊಹೆಯಾಗಿರುತ್ತದೆ. ಎಂದ ಕಲಬುರ್ಗಿ ಅವರ ಮಾತುಗಳು, ಸರ್ವಜ್ಞನ ತ್ರಿಪದಿಗಳ ಸಂಪಾದನೆಗೆ ವಚನಗಳ ಅಧ್ಯಯನ ಎಷ್ಟು ಸಹಕಾರಿ ಎಂಬುದನ್ನು ತಿಳಿಸುತ್ತದೆ.

******

## ಅಡಿಟಿಪ್ಪಣಿಗಳು

1. ಪ್ರೊ. ಎಂ. ವಿ. ಸೀತಾರಾಮಯ್ಯ (ಸಂ): ಸರ್ವಜ್ಞನ ವಚನಗಳು (ಪ್ರಸ್ತಾವನೆ) ಪುಟ – 25
2. ಅದೇ ಕೃತಿ ಪ್ರಸ್ತಾವನೆ ಪುಟ – 30
3. ಅದೇ ಕೃತಿ ಪ್ರಸ್ತಾವನೆ ಪುಟ – 40
4. ಡಾ. ಸಿದ್ಧಯ್ಯ ಪುರಾಣಿಕ (ಸಂ): ಮಣಿಹ ಪುಟ – 277
5. ಸದಾನಂದ ಕನವಳ್ಳಿ (ಸಂ): ಮಹಾಮಾರ್ಗ ಪುಟ – 403
6. ಡಾ. ಸಿದ್ಧಯ್ಯ ಪುರಾಣಿಕ (ಸಂ): ಮಣಿಹ ಪುಟ – 287
7. ಡಾ. ಎಚ್. ಎಂ. ಮರುಳಸಿದ್ಧಯ್ಯ (ಸಂ): ಸ್ಮರಣೀಯರು, ಪುಟ – 41
8. ಸದಾನಂದ ಕನವಳ್ಳಿ, ವೀರಣ್ಣರಾಜೂರ (ಸಂ): ಮಹಾಮಾರ್ಗ ಪುಟ – 405
9. ಡಾ. ಎಲ್. ಬಸವರಾಜು ಪರಮಾರ್ಥ, ಪುಟ – 30
10. ಪ್ರೊ. ಎಂ. ವಿ. ಸೀತಾರಾಮಯ್ಯ (ಸಂ): ಸರ್ವಜ್ಞನ ವಚನಗಳು (ಪ್ರಸ್ತಾವನೆ) ಪುಟ – 37

# ಅಧ್ಯಾಯ – ಐದು

## ಸರ್ವಜ್ಞ ಮತ್ತು ವಚನಕಾರರು

ಕನ್ನಡದಲ್ಲಿ 'ವಚನ' ಎನ್ನುವುದಕ್ಕೆ ನಾನಾರ್ಥಗಳು ದೊರೆಯುತ್ತವೆ. ಉಕ್ತಿ, ಮಾತು, ಸೂಕ್ತಿ ಮುಂತಾದವುಗಳು. ಇವುಗಳು ನೀತಿಯನ್ನು, ವಿವೇಕವನ್ನು, ಬುದ್ಧಿಯ ಮಾತನ್ನು ಹೇಳುವುದರಿಂದ ವಚನಗಳು ಪ್ರಖ್ಯಾತಗೊಂಡಿವೆ.

ಸರ್ವಜ್ಞನ ಮಾತುಗಳಲ್ಲಿಯೂ ಅಷ್ಟೇ ಪ್ರಮಾಣದ ವಿವೇಕದ ನೀತಿಯನ್ನು ಹೇಳುವ ಉಕ್ತಿಗಳು ಕಂಡುಬರುವುದರಿಂದ ಇವನನ್ನು ಒಬ್ಬ ವಚನಕಾರ ಎಂದು ಕರೆಯಬಹುದು. ಸರ್ವಜ್ಞನ ರಚನೆಗಳನ್ನು ವಚನಗಳೆಂದು ಕರೆಯುವುದು ರೂಢಿಯಾಗಿದ್ದರು ಅವು ವಾಸ್ತವಿಕವಾಗಿ ತ್ರಿಪದಿಗಳು. ಶಿವಶರಣರ ವಚನಗಳಿಗೂ ಸರ್ವಜ್ಞನ ವಚನಗಳಿಗೂ ಸರ್ವಜ್ಞನ ತ್ರಿಪದಿಗಳಿಗೂ ಒಳ ತಿರುಳಿನಲ್ಲಿ ಸಾಮ್ಯತೆ ಇರುವುದನ್ನು ಗಮನಿಸಿದಾಗ ಇವುಗಳು ವಚನದ ಆಕಾರವನ್ನು ಪಡೆದವುಗಳೆಂದು ತಿಳಿಯಬಹುದು.

ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೇ ಶತಮಾನ ಒಂದು ಹೊಸ ಸಾಹಿತ್ಯ ಪ್ರಕಾರದ ಸೃಷ್ಟಿಕಾಲವೆಂದು ಹೇಳಬಹುದು. ಏಕೆಂದರೆ ಹಿಂದೆ ಇದ್ದ ಸಾಹಿತ್ಯ ಪ್ರಕಾರದ ಹಳಗನ್ನಡ ಕಾವ್ಯ ಅಥವಾ ಚಂಪೂಯುಗ ಮುಗಿದು ವಚನಕಾರರ ಯುಗ ಪ್ರಾರಂಭವಾಯಿತು. ವಚನಕಾರರು ಮೂಢನಂಬಿಕೆಗಳನ್ನು ಬಲವಾಗಿ ಖಂಡಿಸುವವರಾಗಿದ್ದರು. ಇವರು ಮುಖ್ಯವಾಗಿ ' ಕಾಯಕವೇ ಕೈಲಾಸ' ಎಂಬ ತತ್ವದ ಹಿನ್ನೆಲೆಯಲ್ಲಿ ತಮ್ಮ ಕೃತಿ ರಚನೆಗೆ ಮುಂದಾದರು.

ಈ ವಚನಕಾರರು ಜಾತಿಯನ್ನು ವಿರೋಧಿಸುತ್ತಾರೆ. ಹೆಣ್ಣು ಗಂಡುಗಳಲ್ಲಿ, ಭೇದ ಭಾವವಿಲ್ಲವೆಂದು ಮೇಲು ಕೀಳೆಂಬ ಅಂತರವಿಲ್ಲವೆಂದು ಹೇಳುತ್ತಾರಾದರೂ ಅಂಗದ ಮೇಲೆ ಲಿಂಗವಿರುವವರೆಲ್ಲಾ ಒಂದೇ ಎಂದು ಪ್ರತಿಪಾದಿಸುತ್ತಾರೆ. ವಚನಕಾರರಂತೆ ಸರ್ವಜ್ಞನನು ಸಮಕಾಲೀನ ಸಮಾಜದ ಮೇಲ್ಮೆಗಾಗಿ ಮಿಡಿದಿದ್ದಾನೆ. ಇವನೂ ಸಹ ಜಾತಿಗಳ ಬಗ್ಗೆ ಅತ್ಯಂತ ವಿಡಂಬನಾತ್ಮಕವಾಗಿ ಮಾತನಾಡುತ್ತಾನೆ. ಧಾರ್ಮಿಕ ಡಂಬಾಚಾರವನ್ನು, ಕಪಟ ಸನ್ಯಾಸಗಳನ್ನು ಇವನ ಸಿಡಿಲಿನ ಮಾತಿಗೆ ಗುರಿಯಾಗಿಸಿದ್ದಾನೆ. ಅದೇ ರೀತಿ ಉತ್ತಮವಾದದ್ದನ್ನು ಕಂಡಾಗ ಸಂಕೋಚವಿಲ್ಲದೆ, ಬಾಯಿ ತುಂಬಾ ಹೊಗಳುತ್ತಾನೆ.

ವಚನಕಾರರಿಗೆ ಪಂಡಿತ ಭಾಷೆಯು ತಿಳಿದಿರಲಿಲ್ಲ. ಕಾವ್ಯ ಭಾಷೆಯ ಕಟ್ಟು ಕಟ್ಟಳೆಯಾಗಲೀ ಅಷ್ಟಾಗಿ ಇರಲಿಲ್ಲ. ಆದರಿಂದಲೇ ಎಲ್ಲರೂ ವಚನಗಳನ್ನು ರಚಿಸಲು ಪ್ರಾರಂಭಿಸಿದರು. ಇಲ್ಲಿ ಯಾರು ಎಷ್ಟು ವಚನಗಳನ್ನು ರಚಿಸಿದರು. ವಚನಕಾರರು ಎಷ್ಟು ಮಂದಿ ಎಷ್ಟು ವಚನಗಳನ್ನು ರಚಿಸಿದರು.

ಎಂಬುದು ಎಲ್ಲಿಯೂ ತಿಳಿಯುವುದಿಲ್ಲ. ಆದರೆ ಸಿದ್ಧರಾಮ ಮತ್ತು ಅಲ್ಲಮಪ್ರಭು ಇವರ ಮುಂದಿನ ವಚನಗಳಲ್ಲಿ ಈ ಅಂಶ ಸ್ವಲ್ಪಮಟ್ಟಿಗೆ ವ್ಯಕ್ತವಾಗಿದೆ.

"ಎರಡೆಂಬತ್ತು ಕೋಟಿ ವಚನವ ಹಾಡಿ

ಹಲವ ಹಂಬಲಿಸಿತ್ತೆನ್ನ ಮನವು

ಮನ ಘನವನಱೆಯದು

ಘನ ಮನವನಱೆಯದು

ಗುಹೇಶ್ವರನೆಂಬ ಲಿಂಗವನಱೆದ ಬಳಿಕ

ಗೀತವೆಲ್ಲಾ ಒಂದು ಮಾತಿನೊಳಗು.[೧]

ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ

ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮೂವತ್ತಾಱು ಸಾವಿರ

ಎಮ್ಮಯ್ಯಗಳ ವಚನ ವಚನಕ್ಕೊಂದು

ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ

ಗಂಗಾಂಬಿಕೆಯ ವಚನ ಮೂಱು ಲಕ್ಷದ ಎಂಟು ಸಾಸಿರ

ಎಮ್ಮಕ್ಕ ನಾಗಾಯಿಯ ವಚನ ಮೂರು ಲಕ್ಷದ ತೊಂಬತ್ತಾರು ಸಾಸಿರ

ಮಡಿವಾಳಣ್ಣನ ವಚನ ಮೂಱುಕೋಟಿ ಮುನ್ನೂಱು

ಹಡಪದಯ್ಯಗಳ ವಚನ ಹನ್ನೊಂದು ಸಾಸಿರ

ಮರುಳಸಿದ್ಧರ ವಚನ ಅರವತ್ತೆಂಟು ಸಾಸಿರ . . . . . ಕಪಿಲಸಿದ್ಧ

ಮಲ್ಲಿಕಾರ್ಜುನನ[೨]

---

೧. ಅಲ್ಲಮನ ವಚನ ಚಂದ್ರಿಕೆ: ಶಂ. ಎಲ್. ಬಸವರಾಜು ನಳಿನಿ ಶಂಕರ ಪ್ರಕಾಶನ ಮೈಸೂರು. ೧೯೬೦ ಪುಟ – ೧೩೭

೨. ಶ್ರೀ. ಸಿದ್ದರಾಮೇಶ್ವರ ವಚನಗಳು: ಡಾ॥ ಆರ್. ಸಿ. ಹಿರೇಮಠ. ಕರ್ನಾಟಕ ವಿಶ್ವವಿದ್ಯಲಯ, ಧಾರವಾಡ, ೧೯೬೮ ಪುಟ ೩೫.

ವಚನಕಾರರು ವಸ್ತುಗಳನ್ನೊಳಗೊಂಡು ವಚನ ರಚಿಸಿದ ಸರ್ವಜ್ಞ ತನ್ನ ಕಾಲದಲ್ಲಿನ ಮತ್ತು ಬಸವಾದಿಗಳಾದ ವಚನಕಾರರನ್ನು ವಿಶೇಷವಾಗಿ ತಿಳಿದಿದ್ದವನಾಗಿದ್ದಾನೆ. ಸರ್ವಜ್ಞ ತ್ರಿಪದಿಗಳಲ್ಲಿ ಪದ್ಯಗಳನ್ನು ರಚಿಸಿದ್ದರೂ ಅವುಗಳು ವಚನಗಳೆಂದು ಪ್ರಚಲಿತದಲ್ಲಿರುವುದೇ ಇದಕ್ಕೆ ಕಾರಣವೆಂದು ತಿಳಿಯುತ್ತೇನೆ. ವಚನಕಾರರು ಪ್ರತಿಪಾದಿಸಿದ ದಯೆ, ಧರ್ಮ, ಜಾತಿ, ಮತಗಳ, ಉಚ್ಚ ನೀಚಗಳ ಭಾವನೆಗಳನ್ನು ವಿರೋಧಿಸುತ್ತಾರೆ. ವಚನಕಾರರನ್ನು ಮತ್ತು ವಚನಕಾರರ ಪದಸಮೂಹಗಳನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ.

ಸರ್ವಜ್ಞನ ಗುರುಪದ್ಧತಿಯ ಕುರಿತ ವಚನಗಳು:

ಸುರತರುವು ಮರನಲ್ಲ ಸುರಭಿಯೊಂದಾದಲ್ಲ

ಪುರುಷ ಪಾಷಾಣದೊಳ ಗಲ್ಲ ಗುರುರಾಯ

ನರರೊಳಗಲ್ಲ ಸರ್ವಜ್ಞ

ಇದಕ್ಕೆ ಸಂವಾದಿಯಾಗಿ ತೋಂಟದ ಸಿದ್ದಲಿಂಗೇಶ್ವರ ವಚನಗಳು:

ಸುರತರು ಕಲ್ಪವೃಕ್ಷದೊಳಗಲ್ಲ

ಸುರಧೇನು ಪಶುವಿನೊಳಗಲ್ಲ

ಪುರುಷ ಪಾಷಾಣದೊಳಗಲ್ಲ

ಶಿಷ್ಯನ ಭಾವಕ್ಕೆ ಗುರು ನರನಲ್ಲ

ಗುರುವೇ ಪರಮೇಶ್ವರನೆಂದು ಭಾವಿಸಬಲ್ಲಡೆ ಶಿಷ್ಯನೆಂಬೆನಯ್ಯಾ

ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೆ.

ವಚನಕಾರರಂತೆ ಇವನೂ ಸಮಕಾಲೀನ ಸಮಾಜಕ್ಕಾಗಿ ದುಡಿದಿದ್ದಾನೆ, ಮಿಡಿದಿದ್ದಾನೆ. ಜಾತಿ ವ್ಯವಸ್ಥೆ, ಡಾಂಬಿಕತನ, ಮೂರ್ಖರಿಗೆ, ಕಳ್ಳ ಸನ್ಯಾಸಿಗಳಿಗೆ ಇವನ ಮಾತುಗಳು ಕಾದ ಕಬ್ಬಿಣದಲ್ಲಿ ಬರೆ ಇಟ್ಟಂತೆ ಮಡಿವೆ. ಎ. ಆರ್. ಕೃಷ್ಣಶಾಸ್ತ್ರಿಗಳ ಮಾತಿನಲ್ಲಿ ಹೇಳುವುದಾದರೆ ಸರ್ವಜ್ಞನ ಬರವಣಿಗೆ 'ದನದಂತೆ ನುಗ್ಗುತ್ತದೆ' ಆದರಿಂದಲೆ ಇವನ ವಚನಗಳಲ್ಲಿ "ಜಾತಿಹೀನನ ಮನೆಯ ಜ್ಯೋತಿಯು ಹೀನವಲ್ಲ" ಎಂದಿದ್ದಾನೆ. ವಚನಕಾರರು ಮತ್ತು ಸರ್ವಜ್ಞ ಇಬ್ಬರೂ ಸಾಮಾನ್ಯ ಜನರನ್ನು ದೃಷ್ಟಿಯಲ್ಲಿಟ್ಟು ವಚನಗಳನ್ನು ರಚಿಸಿದ್ದಾರೆ. ವಚನಕಾರರಿಂದ ತಿಳಿದುಕೊಂಡ ಮತ್ತು ಅದು ಸರ್ವಜ್ಞನ ದೃಷ್ಟಿಗೆ ಒಪ್ಪಿಗೆಯಾಗಿ ಅವನ ಅನುಭವಕ್ಕೆ ಬಂದುದನ್ನು ಹೇಳುವುದೆ ಸರ್ವಜ್ಞನ ಉದ್ದೇಶ. ಹಾಗೆಂದರೆ

ಸರ್ವಜ್ಞನಿಗೂ ವಚನಕಾರರಿಗೂ ವ್ಯತ್ಯಾಸವಿಲ್ಲವೆ ಇಲ್ಲ ಎಂದರ್ಥವಲ್ಲ. ಒಂದು ವ್ಯತ್ಯಾಸ ಮಾತ್ರ ಎದ್ದು ಕಾಣುವಂತಿದೆ. ಅದೇನೆಂದರೆ ವಚನಕಾರರು ವಚನ ರಚನೆಯ ಜೊತೆಗೆ ಧರ್ಮ ಪ್ರಚಾರವನ್ನು ಮತ್ತು ನೀತಿ ಬೋಧನೆಯನ್ನು ಹೇಳುತ್ತಾರೆ. ಏಕೆಂದರೆ ಮತ ಪ್ರಸಾರ ವಚನಕಾರರಿಗೆ ಒಂದು ಅನಿವಾರ್ಯವಾದ ಕೆಲಸವಾಗಿತ್ತು. ಆದರೆ ಸರ್ವಜ್ಞನಿಗೆ ಮಾತ್ರ ಯಾವುದೇ ಧರ್ಮದ ಮತ ಪ್ರಸಾರವೂ ಅಗತ್ಯವಿರಲಿಲ್ಲ. ಅವನಿಗೆ ಬೇಕಾಗಿದ್ದು ನೀತಿ ಬೋಧನೆಯೊಂದೇ ಆದರೂ ಆತನಲ್ಲಿ ವೀರಶೈವ ಧರ್ಮದ ಪರಿಭಾಷೆ ಅಲ್ಲಲ್ಲಿ ಬಂದರೂ ಇವನ ಧರ್ಮ ಯಾವುದು ಎಂಬುದು ತುಂಬಾ ಗೌಪ್ಯವಾಗಿದೆ. ಇವನು ಅಲ್ಲಲ್ಲಿ ಹಲವಾರು ಧರ್ಮಗಳನ್ನು ವಿಡಂಬಿಸಿದ್ದರೂ ಎಷ್ಟೋ ಕಡೆ ಅಂತಹವುಗಳ ಶ್ರೇಷ್ಠತೆಯನ್ನು ಮನಸ್ಸು ತುಂಬಿ ಹೇಳಲೂ ಹಿಂಜರಿಯುವುದಿಲ್ಲ.

> "ಕೊಲ್ಲುವ ಧರ್ಮನೊಯ್ದು ಒಲೆಯೊಳಗಿಕ್ಕುವುದು.
> ಕೊಲಲಾಗದೆಂಬ ಜೈನರ ಮತವೆನ್ನ
> ತಲೆಯ ಮೇಲಿರಲಿ ಸರ್ವಜ್ಞ'

ಎಂದು ಜೈನ ಧರ್ಮದ ಶ್ರೇಷ್ಠತೆಯನ್ನು ಕೊಂಡಾಡಿದ್ದಾನೆ.

ವಚನಕಾರರು ಯಾವ ನೂತನ ಸಮಾಜವೊಂದನ್ನು ಕಟ್ಟುವ ಕನಸು ಕಂಡಿದ್ದರೋ ಅದು ಸರ್ವಜ್ಞನಲ್ಲಿಯೂ ಇದೆ. ಇಷ್ಟಲಿಂಗ ಪೂಜೆ, ಗುರುವಿನ ಸೇವೆ ಇವುಗಳನ್ನು ಒಪ್ಪುತ್ತಾನೆ. ಮತ್ತೊಂದು ಕಡೆ ಇವುಗಳನ್ನೇ ವಿಡಂಬಿಸುತ್ತಾನೆ. " ಹಾರುವರೆಂಬುವರ ಹಾರುವರು ನರಕಕ್ಕೆ" ಒಂದು ಕಡೆ ಬ್ರಾಹ್ಮಣರನ್ನು ನಿಂದಿಸಿದರೆ, ಅದೆ ಬಾಯಿಯಿಂದ ಅದೇ ಮಾತುಗಳನ್ನು ಬಳಸಿ "ಆರೈದು ನಡೆಯ ದ್ವಿಜರುಗಳ ಸಂಸರ್ಗವಾರಿಂದಲಧಿಕ" ಎಂದು ಶ್ರೇಷ್ಠತೆಯನ್ನು ಕೊಂಡಾಡಿದ್ದಾನೆ.

ಸರ್ವಜ್ಞನ ಇಡೀ ಸಾಮಾಜಿಕ ಚಿಂತನಗಳು ವಚನಕಾರರ ಪ್ರಭಾವದಿಂದ ರೂಪಿತವಾದವು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಪ್ರಾಚೀನ ತ್ರಿಪದಿಗೂ ಹಾಗೂ ವಚನಕಾರರಿಗೆ ಯಾವುದೇ ರೀತಿಯ ಸಂಬಂಧವಿದೆಯೆಂದು ಊಹಿಸಬಹುದು. "ತ್ರಿಪದಿಗೂ ವಚನಗಳಿಗೂ ಮೂಲದಲ್ಲಿ ಏನೋ ಸಂಬಂಧ ಇದ್ದಿರಬೇಕೆಂಬುದರ ಬಗ್ಗೆ ನನ್ನ ನಂಬಿಕೆ ಇನ್ನೂ ಮಾಯವಾಗಿಲ್ಲ. ನನ್ನ ಪ್ರಬಲ ಸಂದೇಹವಿರುವುದು ಅವುಗಳಿಗೆ ಜನಕ – ಜನ್ಯ ಸಂಬಂಧವಿದೆಯೆಂಬುದರ ಬಗ್ಗೆ ಮಾತ್ರ"[3] ಎಂದು ಡಾ॥ ಎಂ. ಚಿದಾನಂದಮೂರ್ತಿಯವರು ಹೇಳುತ್ತಾರೆ.

ಡಾ॥ ಎಂ. ಚಿದಾನಂದಮೂರ್ತಿಯವರು ಹೇಳುವ ಮಾತನ್ನು ಒಪ್ಪುವಂತಹ ಒಂದು ವಚನವು ಅತ್ಯಂತ ಪ್ರಾಚೀನ ವಚನಕಾರನಾಗಿರುವ ದೇವರ ದಾಸಿಮಯ್ಯನ ವಚನ ಸರ್ವಜ್ಞನಲ್ಲಿ ಸ್ವಲ್ಪ ಬದಲಾವಣೆ ಹೊಂದಿ ಕಂಡುಬರುತ್ತದೆ.

ನಾನೊಂದು ಸುರಿಗೆಯನೇನೆಂದು ಹಿಡಿಮೆನು
ಏನಕಿತ್ತೇನನಿರೆವೆನು ಜಗವೆಲ್ಲ
ನೀನಾಗಿಪ್ಪೆ ಕಾಣಾ ರಾಮನಾಥ ॥

ಎಂಬುದು ಸರ್ವಜ್ಞನಲ್ಲಿ

ಆನೊಂದು ಕೈದುವನು ಎನೆಂದು ಹಿಡಿಮೆನು
ಏನ ಬಿಟ್ಟೀನನಿರೆವೆನು ಜಗವೆಲ್ಲ
ತಾನಾದ ಬಳಿಕ ಸರ್ವಜ್ಞ

ಎಂಬುದರೊಂದಿಗೆ ಹೋಲಿಸಿನೋಡಬಹುದಾಗಿದೆ. ಇದನ್ನು ಗಮನಿಸಿದಾಗ ಡಾ॥ ಎಂ. ಚಿದಾನಂದಮೂರ್ತಿಯವರು 'ದೇವರ ದಾಸೀಮಯ್ಯನ ವಚನಗಳಿಗೂ ಮುಂದೆ ಸರ್ವಜ್ಞ ಬಳಸಿಕೊಂಡ ತ್ರಿಪದಿಗಳಿಗೂ ಮೂಲತಃ ಏನೋ ಸಂಬಂಧವಿದೆಯೆಂಬುದು ಸೂಚಿಸಲಿಕ್ಕಾಗಿ ಮೇಲಿನ ಪ್ಯಾರಾಗಳನ್ನು ಬರೆಯಬೇಕಾಯ್ತು' ಎನ್ನುತ್ತಾರೆ. ಸರ್ವಜ್ಞನ ಮೇಲೆ ಬಸವಣ್ಣನವರ ಪ್ರಭಾವ ದಟ್ಟವಾಗಿರುವುದನ್ನು ನೋಡಬಹುದು. ವಚನಕಾರರ ಹಲವು ಉಕ್ತಿಗಳು ಸರ್ವಜ್ಞನಲ್ಲಿ ಕಂಡುಬರುತ್ತವೆ.

ಸತ್ತುದ ತಿಂಬಾತ ನೆತ್ತಣದ ಹೊಲೆಯನು
ಎಲವೋ ಮಾತಂಗಿಯ ಮಗ ನೀನು
ಸತ್ತುದನೆಳೆವನೆತ್ತಣ ಹೊಲೆಯ?

ಹೊತ್ತು ತಂದು ನೀವು ಕೊಲುವಿರಿ
ಶಾಸ್ತ್ರವೆಂಬುದು ಹೋಲೆಂಗೆ ಮಾರಿ
ವೇದವೆಂಬುದು ನಿಮಗೆ ತಿಳಿಯದು
ನಮ್ಮ ಕೂಡಲ ಸಂಗನ ಶರಣು ಕರ್ಮವಿರಹಿತರು
ಶರಣ ಸನ್ನಿಹಿತರು, ಅನುಪಮಚರಿತರು ಅವರಿಗೆ ತೋರಲು
ಪ್ರತಿಯಿಲ್ಲವೋ ಇದರಿಂದ ತಿಳಿಯುವುದು ಹೊಲೆಯ ಸತ್ತದನು.

ಮಾತ್ರ ತೆಗೆದುಕೊಂಡು ಹೋಗುವುದು ಎಂದಾಗಿದೆ. 'ಬದುಕಿನ ಪ್ರಾಣಿಗಳ ಕೊರಳ ಕೊಯ್ದು ತಿಂದಾತ' ಎನ್ನುವುದು ಸಮಾಜವನ್ನು ವಂಚಿಸುವವರಿಗೆ ಅನ್ವಯಿಸುವ ಮಾತಾಗಿದೆ.

ಸರ್ವಜ್ಞ ದೈವವನ್ನು ಕುರಿತು ಮಾತನಾಡುತ್ತಾನೆ. ದೇವರನ್ನು ವಿಡಂಬನಾ ದೃಷ್ಟಿಯಿಂದ ನೋಡುತ್ತಾನೆ.

ಕಲ್ಲು ಕಲ್ಲನೆ ಒಟ್ಟಿ ಕಲ್ಲಿನಲಿ ಮನೆಕಟ್ಟಿ
ಕಲ್ಲಮೇಲ್ಕಲ್ಲ ಕೊಳುವ ಮಾನವರೆಲ್ಲ
ಕಲ್ಲಿನಂತಹರು ಸರ್ವಜ್ಞ

ಎಂದ ಸರ್ವಜ್ಞನ ವಚನವನ್ನು ಅಲ್ಲಮಪ್ರಭುವಿನ ಒಂದು ವಚನದಲ್ಲಿ ಇದನ್ನು ಹೋಲಿಸಿ ನೋಡಬಹುದು.

ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ
ಆ ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರು
ಲಿಂಗ ಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ ಗುಹೇಶ್ವರ

ಸರ್ವಜ್ಞನು ತಾನು ಕಂಡುದನ್ನು ಬರೆದನು ಎಂಬುದನ್ನು ಒಪ್ಪಬಹುದದರೂ, ಅದರಲ್ಲಿ ವಚನಕಾರರ ಪ್ರಭಾವ ಇರುವುದು ಕಂಡುಬರುತ್ತದೆ. ಏಕೆಂದರೆ ವಚನಕಾರರು ಮತ್ತು ಸರ್ವಜ್ಞ ಇಬ್ಬರೂ ಒಂದೆ ಬಟ್ಟೆಯಲ್ಲಿ ಸಾಗುತ್ತಿರುವ ವ್ಯಕ್ತಿಗಳಾಗಿದ್ದಾರೆ.

"ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ
ದುರ್ಜನರ ಸಂಗದೊಡನಾಟ ಬಚ್ಚಲು
ರೊಚ್ಚಿನಂತಿಹುದು ಸರ್ವಜ್ಞ

ಎಂಬ ವಚನ ಬಸವಣ್ಣನವರಿಂದ ಪ್ರಭಾವಿತಗೊಂಡುದಾಗಿದ್ದರೂ ಸರ್ವಜ್ಞ ಹೇಳುವ ಮಾತುಗಳು ಸ್ವಂತ ಅನುಭವಕ್ಕೆ ಬಂದವುಗಳು ಆಗಿರಬಹುದು.

ದೂರ ದುರ್ಜನರ ಸಂಗ ಭಂಗವಯ್ಯ
ಸಂಗವೆರಡುಂಟು ಒಂದ ಬಿಡು ಒಂದು ಹಿಡಿ,
ಮಂಗಳಮೂರ್ತಿ ನಮ್ಮ ಕೂಡಲ ಸಂಗನ ಶರಣರ.

ಎಂಬ ವಚನವನ್ನಿಟ್ಟು ಸಂವಾದಿಯಾಗಿ ನೋಡಬಹುದು."* ಇನ್ನೊಂದು ವಚನದಲ್ಲಿ ಬಸವಣ್ಣ

---

*೪. ಜಿ.ಎಸ್. ಶಿವರುದ್ರಪ್ಪ : "ವಚನಕಾರರು ಮತ್ತು ಸರ್ವಜ್ಞ (ಲೇಖನ) ಪುಟ–೪೧.

ಕಲ್ಲನಾಗರ ಕಂಡರೆ ಹಾಲನೆರೆ ಎಂಬುದು ದಿಟದ ನಾಗರ

ಕಂಡರೆ ಕೊಲ್ಲೆಂಬರಯ್ಯ

ಉಂಬ ಜಂಗಮ ಬಂದರೆ ನಡೆ ಎಂಬರು ಉಣದ

ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ.

ನಮ್ಮ ಕೂಡಲ ಸಂಗನ ಶರಣರ ಕಂಡು

ಉದಾಸೀನವ ಮಾಡಿದರೆ ಕಲ್ಲು ತಾಗಿದ ಮಿಟ್ಟೆಯಂತಪ್ಪರಯ್ಯಾ

ಈ ರೀತಿ ಬರುವ ಬಸವಣ್ಣನವರ ವಚನ ತ್ರಿಪದಿಯ ಬರೀ ಮೂರೇ ಪಾದದಲ್ಲಿ ಸರ್ವಜ್ಞ ತರುವುದು ಕಂಡುಬರುತ್ತದೆ. ಅಷ್ಟೆ ಅಲ್ಲದೆ ಸಮಾಜವನ್ನು ವಿಡಂಬಿಸುತ್ತಾ,

ಉಣ ಬಂದ ಜಂಗಮಕೆ ಉಣಬಡಿಸಲೊಲ್ಲದೇ

ಉಣದಿಪ್ಪ ಲಿಂಗ ಕುಣಬಡಿಸಿ ಕೈಮುಗಿವ

ಬಣಗುಗಳ ನೋಡ ಸರ್ವಜ್ಞ

ಸಮಾಜ ವಿಡಂಬನೆಯ ಗುಣ ಸರ್ವಜ್ಞನಲ್ಲಿಯೂ ಇದೆ ಹಾಗೂ ವಚನಕಾರರಲ್ಲಿಯೂ ಇದೆ. ವಚನಕಾರರು ಸಮಾಜ ವಿಡಂಬನೆಯ ಜೊತೆಗೆ ಮತ ಪ್ರಚಾರವನ್ನು ಒಂದು ಕಾಯಕವಾಗಿ ಮಾಡಿದರೆ ಸರ್ವಜ್ಞ ಮಾತ್ರ ಯಾವುದೇ ಧರ್ಮ ಪ್ರಚಾರಕ್ಕೆ ಕಿವಿಕೊಡದೆ ಎಲ್ಲಾ ಧರ್ಮಗಳನ್ನು ಸಮನಾಗಿ ಕಂಡು ಉತ್ತಮವಾದುದನ್ನು ಒಪ್ಪಿಕೊಳ್ಳುತ್ತಾ ಸರ್ವಜ್ಞನಿಗೆ ಹಿಡಿಸದೇ ಇರುವ ಡಂಭಾಚಾರ, ಅನೀತಿ, ಕ್ರೌರ್ಯ ಮುಂತಾದವುಗಳನ್ನು ಯಾವುದೇ ಮುಲಾಜಿಲ್ಲದೆ ವಿರೋಧಿಸುತ್ತಾನೆ. ವಚನಕಾರರ ಧ್ಯೇಯಧೋರಣೆಗಳನ್ನು ನೀತಿ ನಿಯಮಗಳನ್ನು ಆಚಾರ ವಿಚಾರಗಳನ್ನು ತಾನೂ ರೂಪಿಸಿಕೊಂಡು ಅದೇ ದಾರಿಯಲ್ಲಿ ನಡೆದು ವಚನಕಾರರಿಗಿಂತಲೂ ಮುಂದಿದ್ದಾನೆ ಎನ್ನಬಹುದು.

ವಚನಕಾರರ ಹೇಳುವ ಜಾತಿ ಬೇಧದ ನಿವಾರಣೆ ಸಮಾಜದಲ್ಲಿ ಮೇಲು ಕೀಳೆಂಬ ಭವನೆಯ ನಿರಾಕರಣೆಯನ್ನು ನೋಡಬಹುದು. ಹಾಗೂ ಸಮಾಜದ ಶುದ್ಧೀಕರಣಕ್ಕೆ ನಿರಂತರವಾಗಿ ದುಡಿಯುವುದು. ಸರ್ವಜ್ಞನ ಧ್ಯೇಯವಾಗಿದೆ. ಸರ್ವಜ್ಞನ ಧೋರಣೆಗಳನ್ನು ಇಂದಿನ ಸಮಾಜಕ್ಕೆ ಪೂರಕವಾಗಿ ತೆರೆದುಕೊಂಡರೆ ಭ್ರಷ್ಟಾಚರಗಳು ಕೆಲಮಟ್ಟಿಗಾದರೂ ನಿವಾರಣೆಯಾಗಬಹುದೆಂದು ಹೇಳಬಹುದು.

ಈ ವಿಷಯದಲ್ಲಿ ಆರ್. ಸಿ. ಹಿರೇಮಠ ಅವರು ಹೀಗೆ ಹೇಳಿದ್ದಾರೆ. "ವಚನಕಾರರಂತೆ ಸರ್ವಜ್ಞ ವಿಚಾರವಾದಿ, ಅನುಭಾವಿ, ಸಮಾಜ ವಿಮರ್ಶಕ ಮತ್ತು ಕ್ರಾಂತಿಕಾರಕ, ಜನಸಾಮಾನ್ಯರ ಜೀವನವನ್ನು ತಿದ್ದಿ ತೀಡುವುದೇ ಅವನ ಉದ್ದೇಶವಾಗಿತ್ತು. ದಯೆ ಆತನ ಧರ್ಮವಾಗಿತ್ತು. ಕಾಯಕ ವೃತ್ತಿಯಾಯಿತು. ಸಮಾಜದಲ್ಲಿದ್ದ ಜಾತಿ ಮತಗಳ ವೈಷಮ್ಯವನ್ನು ತೊಡೆದು ಹಾಕಲು ಮೇಲು ಕೀಳೆಂಬ ಭಾವನೆಯನ್ನು ಕಿತ್ತು ಬಿಸುಟಲು ಆತನು ನಿರಂತರ ಹೋರಾಡಿದನು. ಸದಾಚಾರ ಸನ್ಮಾರ್ಗಗಳೆ ಜೀವನದ ಮೌಲ್ಯಗಳೆಂದು ಸ್ಪಷ್ಟಪಡಿಸಿದನು. ಶಿವಶರಣರ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರಗಳನ್ನು ಸರ್ವಜ್ಞನು ತನ್ನ ವಚನಗಳಲ್ಲಿ ಪ್ರತಿಪಾದಿಸದಂತೆ ಅವರ ಜೀವನ ಹಾಗೂ ಸಾಮಾಜಿಕ ಮೌಲ್ಯಗಳನ್ನು ಧಾರಾಳವಾಗಿ ಪ್ರತಿಪಾದಿಸುತ್ತಾನೆ."[5]

## ಸರ್ವಜ್ಞನ ಕ್ರಾಂತಿಯ ಭಾವನೆ.

ಹನ್ನೆರಡನೇ ಶತಮಾನದಲ್ಲಿ ಆದ ಕ್ರಾಂತಿಯು ಮುಂದುವರಿದಂತೆ ಸನಾತನ ಧರ್ಮದಲ್ಲಿದ್ದ ಕೊರತೆ ಲೋಪದೋಷಗಳನ್ನು ಹೊರಗೆಡವಿ ಜನರಿಗೆ ಮಾರ್ಗದರ್ಶನ ನೀಡಿದ ಮಹಾತ್ಮರು ಧಾರ್ಮಿಕವಾಗಿ ಕ್ರಾಂತಿಯನ್ನು ನಡೆಸಿದರು. ಅದಕ್ಕಿಂತಲೂ ಮೊದಲು ಬುದ್ಧನು ಹಿಂದೂ ಧರ್ಮದ ದೋಷಗಳನ್ನು ದೂರಮಾಡಲು ಬಯಸಿ ಬೌದ್ಧ ಧರ್ಮವನ್ನು ಸ್ಥಾಪಿಸಿ ಜನರ ಮಾನ್ಯತೆಗಳಿಸಿದನು.

ಅನಂತರದ ಕಾಲದಲ್ಲಿ ಮತ ಭೇದ ಉಂಟಾಗಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಮುಂತಾದ ಪಂಥಗಳು ಬಂದವು. ವೀರಶೈವ ಮತ ಆರಂಭವಾಯಿತು. ಶರಣರಿಂದ ರಚಿತವಾದ ವಚನಗಳು ಕನ್ನಡದ ಉಪನಿಷತ್ತುಗಳೆಂದು ಕರೆಯಲ್ಪಟ್ಟವು. ಸರ್ವಜ್ಞ ಕವಿಯು ಕ್ರಾತಿಕಾರಕ ವಿಚಾರವಾದಿಗಳ ಗುಂಪಿನವನು. "ಸ್ತ್ರೀಯರಿಗೆ ಮೋಕ್ಷ ಮಾರ್ಗಕ್ಕೆ ಅರ್ಹತೆಯಿಲ್ಲ, ವೇದಾಧ್ಯಯನವೂ ಇಲ್ಲವೆಂದವರನ್ನು ಹೀಗೆ ವಿಚರಿಸಿದ್ದಾನೆ.

ಪಲ್ಲಕ್ಕಿ ಏರಿದವರೆಲ್ಲಿಂದ ಬಂದಿಹರು

ನೆಲ್ಲಕ್ಕಿಯಂತೆ ಸುಲಿವಲ್ಲ । ಹಿರಿಯರು

ನಲ್ಲಳಿಂದಲ್ಲೆ ಸರ್ವಜ್ಞ

ಸನ್ಯಾಸವನ್ನು ಸ್ವೀಕರಿಸಿದವರು ಎಲ್ಲಿಂದ ಹುಟ್ಟಿದರು? ಎಂದು ಧೀರತನದಿಂದ ಪ್ರಶ್ನಿಸುವನು. ಹೀಗೆ ಯಾರ ಹಂಗಿಲ್ಲದೇ ಸಮಾಜದ ಉದ್ಧಾರಕ್ಕೆ ಶ್ರಮಪಟ್ಟ ವೀರ ಧಾರ್ಮಿಕ ಕ್ರಾಂತಿಕಾರಿ ಸರ್ವಜ್ಞ."[6]

ಅನೇಕ ವಚನಗಳನ್ನು ಶರಣರು ಸ್ಫೂರ್ತಿ ಬಂದಾಗ ಅಂದು ಅವು ತಮ್ಮ ಅಂತಸ್ಸತ್ವದಿಂದಲೂ ಸತ್ಯಸಾರದಿಂದಲೂ ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ ಬಿದ್ದು ವಚನ ಕರ್ತೃಗಳ ಎಷ್ಟೋ ಕಾಲದ ಅನಂತರ ಬರಹಕ್ಕೂ ಪುಸ್ತಕ ರೂಪಕ್ಕೂ ಬಂದಂತೆ ತೋರುತ್ತದೆ. ಈಗ ಪ್ರಕಟವಾಗಿರುವ ಅನೇಕ ವಚನ ಗ್ರಂಥಗಳಲ್ಲಿ ಭಕ್ತ, ಮಾಹೇಶ್ವರ ಮುಂತಾದ ವಿಭಾಗಳು ಆಯಾ ಸಂಪಾದಕರು ಮಾಡಿಕೊಂಡವು. ಇದರಂತೆ ಸರ್ವಜ್ಞನ ವಚನಗಳು ಕೂಡ ಅವು ಪ್ರಾಸಬದ್ಧವಾದ, ವಡಿಬದ್ಧವಾದ ತ್ರಿಪದಿಗಳು. ಆದ್ದರಿಂದ ಅವನ್ನು ಸರ್ವಜ್ಞನು ವಚನಕಾರರಂತೆ, ಅಪ್ರಯತ್ನವಾಗಿ, ತನ್ಮಯನಾಗಿ, ಸ್ಫೂರ್ತಿಮತ್ತಾಗಿ ಎಲ್ಲಿಯೋ ಅಂದುಬಿಟ್ಟು ಹೋದನೆಂದು ಹೇಳುವ ಹಾಗಿಲ್ಲ. ಆದರೆ ಧರ್ಮ, ಅರ್ಥ, ಕಾಮ, ಮೋಷ. ನೀತಿ ಜ್ಞಾನ, ಸದಾಚಾರ, ಸದ್ಗತಿ, ಲೌಕಿಕ, ಪಾರಮಾರ್ಥಿಕ ಎಂದು ಮುಂತಾಗಿ ಯಾವ ವಿಭಾಗ ಕ್ರಮವನ್ನು ಮನಸ್ಸಿನಲ್ಲಿಟ್ಟುಕೊಂಡು, ಕವಿಗಳು ಕಥೆಗಾರರೂ ಒಂದು ಪರಿಚ್ಛೇದವಾಗುತ್ತಲೂ ಮತ್ತೊಂದು ಪರಿಚ್ಛೇದವನ್ನು ಬರೆಯುವಂತೆ ಕ್ರಮವರಿತು ಕಟ್ಟಿಗೆ ಸಿಕ್ಕಿ ಬರೆದಿಲ್ಲ; ಬರೆದಿಡಬೇಕೆಂದು ಆಶೆಯೂ ಅವನಿಗೆ ಇದ್ದಂತೆ ತೋರುವುದಿಲ್ಲ. ಆದರೆ ಗದ್ಯ ವಚನಗಳಿಗಿಂತಲೂ ಇವು ಬಿಗಿಯಾಗಿ, ಸೊಗಸಾಗಿ ರಾಗದಲ್ಲಿದ್ದರಿಂದ ಹೆಚ್ಚಾಗಿ ಮನಸ್ಸಿಗೆ ಅಂಟಿ, ನಾಟಿ, ದೃಢವಾಗಿ ನಿಂತಿರಬೇಕು, ಅಷ್ಟೆ. ನಮ್ಮ ಅನುಕೂಲಕೋಸ್ಕರ ನಾವು ಅವುಗಳನ್ನು ವಿಚಾರಾನುಸರವಾಗಿ ವಿಭಾಗ ಮಾಡಿಕೊಳ್ಳಬಹುದು.

ಜಿ. ಎಸ್. ಶಿವರುದ್ರಪ್ಪನವರು "ಸರ್ವಜ್ಞನ ವಚನಗಳು" ಬಹು ಮಟ್ಟಿಗೆ 'ಮಿತ್ರ ಸಮ್ಮಿತ' ಎಂಬ ವರ್ಗಕ್ಕೆ ಸೇರುತ್ತದೆ. ಹಿತೈಷಿಯಾದ ಗೆಳೆಯನೊಬ್ಬನು ಈ ಲೋಕದಲ್ಲಿ ನಡೆದುಕೊಳ್ಳಬೇಕಾದ ನಿರ್ದೇಶನವನ್ನು ನಯವಾಗಿ, ಆದರೆ ಕೆಲವು ಸಲ ಕಟುವಾಗಿ, ಹೇಳಿದ ಹಾಗಿದೆ ಈ ಸರ್ವಜ್ಞನ ಧಾಟಿ.... ಸರ್ವಜ್ಞನ ಕಾವ್ಯ ನಿಜವಾದ ಅರ್ಥದಲ್ಲಿ ವ್ಯವಹಾರ ಕಾವ್ಯ ಎಂದು ಅಭಿಪ್ರಾಯಪಟ್ಟಿದ್ದಾರೆ. ಜನಪದ ಸಾಹಿತ್ಯದ ತ್ರಿಪದಿಗಳಲ್ಲಿ ಕಂಡುಬರುವ ಕಾವ್ಯ ಸೌಂದರ್ಯ ಸರ್ವಜ್ಞನ ಅನೇಕ ತ್ರಿಪದಿಗಳಲ್ಲಿ ಕಾಣುವುದಿಲ್ಲ. ಅದರಂತೆ, ವಚನಕಾರರ, ಅದರಲ್ಲೂ ಪ್ರಮುಖ ವಚನಕಾರರ ವಚನಗಳಲ್ಲಿರುವ ಕಾವ್ಯ ಗುಣ ಸರ್ವಜ್ಞನಲ್ಲಿಲ್ಲ. ಎಂದು ಜಿ. ಎಸ್. ಶಿವರುದ್ರಪ್ಪನವರು ಎತ್ತಿ ತೋರಿಸಿದ್ದಾರೆ."[7]

ಸರ್ವಜ್ಞನ ಭಕ್ತಪದ್ಧತಿಯಲ್ಲಿನ ಈ ವಚನ:

ದೇಹ ದೇವಾಲಯವು ಜೀವವೇ ಶಿವಲಿಂಗ

ಬಾಹ್ಯಗಳಳಿದು ಭಜಿಪಂಗೆ ಮುಕ್ತಿ ಸಂ

ದೇಹವಿಲ್ಲೆಂದ ಸರ್ವಜ್ಞ

ಅಲ್ಲಮಪ್ರಭುವಿನ;

"ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ ದೇವಾಲಯವೇಕೆ?

ಎರಡಕ್ಕೆ ಹೇಳಲಿಲ್ಲಯ್ಯ

ಗುಹೇಶ್ವರ ನೀನು ಕಲ್ಲಾದರೆ ನಾನೇನಪ್ಪೆನು.

ಈ ವಚನವನ್ನು ಹೋಲುತ್ತದೆ.

ಸರ್ವಜ್ಞನ ಕೆಲವು ವಚನಗಳನ್ನು ಪ್ರಾಚೀನ ವಚನಕಾರರ ಕೆಲವು ವಚನಗಳೊಂದಿಗೆ ಸಮೀಕರಿಸಲಾಯಿತು. ಸರ್ವಜ್ಞ ವಚನಕಾರರಿಂದ ಮಾತ್ರವಲ್ಲದೆ ಪ್ರಾಚೀನ ಸಂಸ್ಕೃತ ಕವಿಗಳಾದ ಪುಷ್ಪದಂತ ವರರುಚಿಯೇ ಮೊದಲಾದವರಿಂದ ಪ್ರಭಾವಿತನಾಗಿದ್ದನೆಂಬುದಕ್ಕೆ ಸ್ಪಷ್ಟ ನಿದರ್ಶನಗಳಿವೆ."[8]

ತಾತ್ವಿಕ ಹಾಗೂ ಆಧ್ಯಾತ್ಮ ವಿಚಾರಗಳಲ್ಲಿಯೂ ವಚನಾಕಾರರಿಗೂ ಸರ್ವಜ್ಞನಿಗೂ ವಿಶೇಷ ಸಾಮ್ಯವಿದೆ. 'ದೇವನೊಬ್ಬ ನಾಮ ಹಲವು' ಎಂದು ವಚನಾಕಾರರು ಒಬ್ಬ ದೇವನನ್ನು ಮನ್ನಿಸಿದಂತೆ ಸರ್ವಜ್ಞನೂ,

ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ಮತ್ತೆ

ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ

ಒಬ್ಬನೇ ದೇವ ಸರ್ವಜ್ಞ॥

ಎಂದು ಸಾರಿದನು. ಸರ್ವಜ್ಞನು ವೀರಶೈವನಾಗಿ ಜನಿಸಿ ಷಟ್‌ಸ್ಥಲ ಸಿದ್ಧಾಂತವನ್ನು ಜೀವಿಸಿ ಶರಣ ಪರಂಪರೆಯಲ್ಲಿ ಬಾಳಿ ಬದುಕಿರುವನು. ಆತನು ವಚನಗಳಲ್ಲಿ ಈ ಸಿದ್ಧಾಂತವಿರುವುದನ್ನು ಗಮನಿಸಿ ೧೬ನೇಯ ಶತಮಾನದ ವಚನ ಸಾಹಿತ್ಯ ಸಂಕಲನಕಾರರು ಮಿಕ್ಕ ಶರಣರ ವಚನಗಳಂತೆ ಸರ್ವಜ್ಞನ ತ್ರಿಪದಿಗಳನ್ನು ಷಟ್‌ಸ್ಥಲ ಪ್ರಕಾರದಲ್ಲಿ ಸಂಗ್ರಹಿಸಿದ್ದಾರೆ.

******

# ಅಡಿಟಿಪ್ಪಣಿಗಳು

(೧) ಡಾ. ಎಲ್. ಬಸವರಾಜು (ಸಂ) :– 'ಅಲ್ಲಮನ ವಚನಚಂದ್ರಿಕೆ, ಪುಟ – ೧೩೭
ಪ್ರ: ನಳಿನಿಶಂಕರ ಪ್ರಕಾಶನ
ಮೈಸೂರು, (೧೯೬೦)

(೨) ಡಾ. ಆರ್. ಸಿ. ಹಿರೇಮಠ :– 'ಶ್ರೀ ಸಿದ್ಧರಾಮೇಶ್ವರ ವಚನಗಳು', ಪುಟ – ೩೫
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ– (೧೯೬೮)

(೩) ಡಾ. ಈ. ವಿ. ದಾಸೇಗೌಡ :– 'ಸರ್ವಜ್ಞ ಮತ್ತು ಜಾನಪದ', ಪುಟ – ೨೫
ಕನ್ನಡ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ
ಬೆಂಗಳೂರು.

(೪) ಡಾ|| ಜಿ.ಎಸ್. ಶಿವರುದ್ರಪ್ಪ :– ಸರ್ವಜ್ಞ, ವಚನಕಾರರು ಮತ್ತು ಸಾಹಿತ್ಯ(ಲೇಖನ), ಪುಟ–೪೧

(೫) ಡಾ. ಆರ್. ಸಿ. ಹಿರೇಮಠ :– ವಚನ ಸಾಹಿತ್ಯ ಹಾಗೂ ಸರ್ವಜ್ಞ, ಪುಟ – ೩೬
ಸರ್ವಜ್ಞ ಕವಿ (ಕ.ವಿ.ವಿ.)

(೬) ಶ್ರೀ. ಜಿ.ವಿ. ಶಾಸ್ತ್ರೀ :– ಸರ್ವಜ್ಞ ಮೂರ್ತಿ ವಚನಗಳು, ಪುಟ – ೧೦.

(೭) ಡಾ. ಜಿ. ಎಸ್. ಶಿವರುದ್ರಪ್ಪ :– 'ಸರ್ವಜ್ಞ', ಪುಟ – ೬
(ಕನಾಟಕ ಭಾರತಿ,೪೭)

(೮) ಜಿ. ಎಸ್. ಉಮಾಪತಿಶಾಸ್ತ್ರಿ :– 'ಸರ್ವಜ್ಞ ಮೂರ್ತಿಯ ವಚನಗಳು', ಪುಟ – ೫೭
ಶಾರದಭವನ ಪ್ರಕಾಶನ, ಬಾಗಲ ಕೋಟೆ (೧೯೭೩).

# ಅಧ್ಯಾಯ – ಆರು

# "ಸರ್ವಜ್ಞ ಮತ್ತು ವೇಮನ, ತಿರುವಳ್ಳುವರ್"

ಕನ್ನಡ ಸಾಹಿತ್ಯದಲ್ಲಿ ಸರ್ವಜ್ಞನನ್ನು ಕನ್ನಡಿಗರು ನೆನೆಯುವಂತೆ, ತೆಲುಗು ಸಾಹಿತ್ಯದಲ್ಲಿ ವೇಮನನನ್ನು ನೆನೆಯುತ್ತಾರೆ. ದ್ರಾವಿಡ ಭಾಷೆಗಳಲ್ಲಿ ಕನ್ನಡ ಮತ್ತು ತೆಲುಗಿಗೆ ಎಷ್ಟು ಹತ್ತಿರದ ಸಂಬಂಧವಿದೆಯೋ ಅಷ್ಟೇ ಹತ್ತಿರದ ಸಂಬಂಧ ಸರ್ವಜ್ಞ ಮತ್ತು ವೇಮನನಿಗಿದೆ . ಸರ್ವಜ್ಞ ಮತ್ತು ವೇಮನ ಇವರನ್ನು ಬಿಟ್ಟರೆ ತಮ್ಮ ವಚನಗಳಿಂದ ಸಮಾಜವನ್ನು ಸನ್ಮಾರ್ಗದಲ್ಲಿ ಹೋಗುವಂತೆ ಮಾಡಿ ಚಿರಪರಿಚಿತರಾದವರಲ್ಲಿ ನೆರೆ ನಾಡಿನ ತಮಿಳು ಸಾಹಿತ್ಯದ 'ತಿರುವಳ್ಳುವರ್' ಮತ್ತೊಬ್ಬರಾಗಿ ನಿಲ್ಲುತ್ತಾರೆ. ಸರ್ವಜ್ಞ, ವೇಮನ ಮತ್ತು ತಿರುವಳ್ಳುವರು ಈ ಮೂವರೂ ಸುಪ್ರಸಿದ್ಧರು. ಇವರು ತಮ್ಮ ನೀತಿ ವಚನಗಳಿಂದ ಜೀವನಮಾರ್ಗದರ್ಶಕರಾಗಿದ್ದಾರೆ. ಸರ್ವಸುಲಭವಾದ ತಿಳಿ ನುಡಿಗಳಿಂದ ಎಲ್ಲರಿಗೂ ಪರಿಚಿತರಾಗಿದ್ದಾರೆ, ಜನಪ್ರಿಯರಾಗಿದ್ದಾರೆ.

ಕವಿಗಳಲ್ಲಿ ಪ್ರಮುಖವಾಗಿ ಎರಡು ವಿಧವಾದ ಕವಿಗಳನ್ನು ನೋಡಬಹುದು.

(1) **<u>ಯೋಗಿಗಳಾಗಿ ಕವಿಯಾದವರು:</u>**– ಅಂತಹವರ ಸಾಲಿನಲ್ಲಿ ಸರ್ವಜ್ಞ ಮತ್ತು ವೇಮನ ನಿಲ್ಲುತ್ತಾರೆ.

(2) **<u>ಭೋಗಿಗಳಾಗಿ ಕವಿಯಾದವರು:</u>**– ಅಂತಹವರಲ್ಲಿ ತಿರುವಳ್ಳುವರ್ ಒಬ್ಬ. ಇವನು ಜೀವನ ಪರ್ಯಂತ ಗೃಹಸ್ಥನಾಗಿಯೇ ಇದ್ದು, ಜನಪ್ರಿಯವಾದ ಕವಿಯಾಗಿದ್ದಾನೆ.

ಸರ್ವಜ್ಞ ಮತ್ತು ವೇಮನ ಇಬ್ಬರು ಪ್ರಶ್ನಾತೀತವಾಗಿ ನಿಲ್ಲುವಂತಹವರು. ಇವರಿಗೆ ಸಂಬಂಧಿಸಿದ 'ಯಾವುದೇ ಖಚಿತ ಮಾಹಿತಿಯು ಲಭ್ಯವಾಗದೆ ಇರುವುದರಿಂದ ಇವರನ್ನು ದ್ವಂದ್ವ ದೃಷ್ಟಿಯಿಂದ ಒಪ್ಪಿಕೊಳ್ಳಬೇಕಾಗಿದೆ. ಆದರೆ ಇವರಿಬ್ಬರಿಗೂ ಭಿನ್ನವಾಗಿ ನಿಲ್ಲವವನು ತಿರುವಳ್ಳುವರ್. ಇವನು ಮದ್ರಾಸಿನ ಮೈಲಾಪುರದಲ್ಲಿ ವಾಸಿಸುತ್ತಿದ್ದನಂತೆ. "ತಿರುವಳ್ಳುವರ್ ಬರೆದ ತಿರುಕ್ಕುರಳ್"ಪ್ರಪಂಚದಲ್ಲೇ ಪ್ರಸಿದ್ಧಿಯನ್ನು ಹೊಂದಿದಕಾವ್ಯ. ತಿರುವಳ್ಳುವರ್ ಕ್ರಿ.ಶ. ಮೊದಲನೇ ಶತಮಾನಕ್ಕೆ ಸೇರಿದವನೆಂದು ಕೆಲವು ವಿಮರ್ಶಕರು ಅಭಿಪ್ರಾಯಪಡುತ್ತಾರೆ".[1]

ಸರ್ವಜ್ಞನದು 12ನೇ ಶತಮಾನದಿಂದ 18ನೇ ಶತಮಾನದವರೆಗೆ ಹಾಗೂ ವೇಮನ 9ನೇ ಶತಮಾನದಿಂದ 18ನೇ ಶತಮಾನದವರೆಗೂ ಜೀವಿತಕಾಲ ಹರಡಿಕೊಂಡಿದೆ. ಸರ್ವಜ್ಞ ಬಸವಣ್ಣನನ್ನು ಮತ್ತು ಕೆಲವು ಶಿವಶರಣರನ್ನು ಸ್ಮರಿಸುತ್ತಿರುವುದರಿಂದ ಸರ್ವಜ್ಞ 12ನೇ ಶತಮಾನಕ್ಕೆ ಈಚಿನವನೆಂದೂ ಸರ್ವಜ್ಞನ ಹೆಸರಿನಲ್ಲಿರುವ ಕಾಲಜ್ಞಾನಗಳಲ್ಲಿ ಮುಕ್ತವಾಗಿರುವ ವಿಜಯನಗರ ಪತನ, ಹಿಕ್ಕೇರಿ ಸಂಸ್ಥಾನ

ಪತನ (1763) ಬ್ರಿಟೀಷರಿಗೆ ಶ್ರೀರಂಗಪಟ್ಟಣ ವಶವಾದದ್ದು (1799) ನ್ನೂ ನೋಡಿ ಕಿಟೆಲ್ ಸುಮಾರು 1800 ಸರ್ವಜ್ಞನಕಾಲ ಎಂದಿದ್ದಾರೆ. ಪ್ರೋ॥ ಜಿ. ಎಂ. ಉಮಾಪತಿಶಾಸ್ತ್ರಿಯವರು 1300 ರಿಂದ 1500 ಎಂದೂ ವಚನಗಳ ಭಾಷೆಯನ್ನು ನೋಡಿ ಕ್ರಿ.ಶ.1600 ಎಂದು ಎ. ಆರ್ ಕೃಷ್ಣಶಾಸ್ತ್ರಿ ಮತ್ತು ಉತ್ತಂಗಿ ಚನ್ನಪ್ಪ ಹೇಳಿದರೆ, ಡಾ.ಎಲ್. ಬಸವರಾಜು 1636 ಎಂದು ಹೇಳುತ್ತಾರೆ. ಸರ್ವಜ್ಞನ ಕಾಲ ಸುಮಾರು 16 ನೇ ಶತಮಾನದ ಆದಿ ಭಾಗವೆಂದು ತಿಳಿಯಬಹುದು.

ಇನ್ನೂ ವೇಮನನ ಕಾಲದ ಬಗ್ಗೆ ಸಿಕ್ಕುಗಳನ್ನು ನೋಡೋಣ. "ಕೇಟುಮಳ ಕಾಮೇಶ್ವರರಾವು" ತಮ್ಮ 'ಪೂರ್ವಾಂಧ್ರಕವಲು' ಎಂಬ ಪುಸ್ತಕದಲ್ಲಿ ವೇಮನನ ಕಾಲ ಸುಮರು ಕ್ರಿ.ಶ 800 ಎಂದು ಹೇಳುತ್ತಾರೆ. ಇದಕ್ಕೆ ಅವರು ಕೊಡುವ ಆಧಾರಗಳು 11ನೇ ಶತಮಾನದಲ್ಲಿ ಭೀಮನ ಛಂದಸ್ಸಿನಲ್ಲಿ 'ಹತ್ತಾವಡಿ' (ಅಕ್ಷರ ಮೈತ್ರಿಯುಳ್ಳ ತೆಲುಗು ಯತಿ) ಗಳನ್ನು ಹೇಳಿದ್ದಾನೆ. 9ನೇ ಶತಮಾನದಲ್ಲಿ ರೇಚನಾ 'ಕವಿಜನಾಶ್ರಯಮು' ಎಂಬ ಛಂದೋಗ್ರಂಥದಲ್ಲಿ ನಾಲ್ಕು ವಡಿಗಳನ್ನು ಮಾತ್ರ ಹೇಳಿದ್ದಾನೆ. ವೇಮನ 2/3 ವಡಿಗಳನ್ನು ಮಾತ್ರಬಳಸಿರುವುದರಿಂದ ಈತ ಕ್ರಿ.ಶ 800ರ ಕಾಲದವನು."[2]

ಆದರೆ ಇಷ್ಟನ್ನು ಮಾತ್ರ ಆಧಾರವಾಗಿ ಬಳಸಿ ಕಾಲ ನಿರ್ಣಯಿಸುವುದು ಸುಲಭವಲ್ಲ. ವೇಮನ ರೆಡ್ಡಿರಾಜರ ವಂಶಕ್ಕೆ ಸೇರಿದವನೆಂದು ಅನೇಕ ಐತಿಹ್ಯಗಳಲ್ಲಿ ಬರುತ್ತದೆಯಂತೆ. ರೆಡ್ಡಿರಾಜ ತೆಲುಗು ದೇಶವನ್ನು ಕ್ರಿ. ಶ. 1328 ರಿಂದ 1428 ರವರೆಗೆ ಪರಿಪಾಲಿಸಿದ್ದಾನೆ. 16ನೇ ಶತಮಾನದವನಾದ 'ಎಡಪಾಟಿಮಲ್ಲ'ನ 'ಮಲ್ಲಣಚರಿತಮು', 16ನೇ ಶತಮಾನದವನಾದ ತುರುಗರಾಮಕವಿಯ 'ನಗರ ಖಂಡಮು', 17ನೇ ಶತಮಾನದಲ್ಲಿ 'ಪಿಂಗಳಿಎಲ್ಲ'ನ 'ತೋಭ್ಯಚರಿತೆ'ಯಲ್ಲಿ ವೇಮನನನ್ನು ಸ್ತುತಿಸಿದ್ದಾರೆ. ಆ ವೇಮನ ನಮ್ಮವನಲ್ಲ ಎಂದು 'ರಾಳ್ಲಪಲ್ಲಿ ಅನಂತಕೃಷ್ಣಶರ್ಮ' ಅಭಿಪ್ರಾಯಡುತ್ತಾರೆ. ಇವರು ವೇಮನ ಸುಮಾರು 15ನೇ ಶತಮಾನದವನೆಂದು ಭಾವಿಸಬಹುದೆಂಬ ಅಭಿಪ್ರಾಯಕ್ಕೆ ಬರುತ್ತಾರೆ. ಸರ್ವಜ್ಞ ಸುಮಾರು 16ನೇ ಶತಮಾನದ ಆದಿಭಾಗಕ್ಕೆ ಬಂದು ನಿಲ್ಲುತ್ತಾನೆ. ಶೇಷಾದ್ರಿರಮಣ ಕವಿಗಳು ಇವನ ಕಾಲ ಕ್ರಿ.ಶ. 1540 ರಿಂದ 1600 ಎಂದು ನಿರ್ಣಯಿಸುತ್ತಾರೆ. ಸಿ. ಪಿ ಬ್ರೌನ್ ಅವರು 17ನೇ ಶತಮಾನದ ಆರಂಭದಲ್ಲಿ ವೇಮನ ಜನಿಸಿದ್ದನೆಂದು ನಂಬುತ್ತಾರೆ.

ಇನ್ನು ಈ ರತ್ನತ್ರಯರ ವಚನಗಳ ಸಂಖ್ಯೆಯ ಕಡೆಗೆ ಗಮನ ಹರಿಸೋಣ. ತಮಿಳಿನ ತಿರುವಳ್ಳುವರ್ ಇಂತಿಷ್ಟೇ ಪದ್ಯಗಳನ್ನು ಬರೆದ ಎಂದು ಲೇಖಕರು ಸಿದ್ಧಮಾಡಿ ತೋರಿಸುತ್ತಾರೆ. ಇವನು ರಚಿಸಿದ ಪದ್ಯಗಳು ಧರ್ಮ, ಅರ್ಥ, ಕಾಮ, ಈ ಮೂರು ಭಾಗಗಳಲ್ಲಿ ಬರೆದಿದ್ದಾನೆ ಒಟ್ಟು 1330

ಪದ್ಯಗಳಿವೆ ಇದರಲ್ಲಿ ಧರ್ಮವನ್ನು ಕುರಿತು 380, ಅರ್ಥವನ್ನು ಕುರಿತು 700 ಕಾಮವನ್ನು ಕುರಿತು 250 ಪದ್ಯಗಳೂ ಇವೆ ಎಂಬುದಾಗಿ ತೆಂಗಿರಾಲಾ ವೆಂಕಟಸುಬ್ಬರಾವ್ ವೇಮನ ಸರ್ವಜ್ಞ ಎನ್ನುವ ಲೇಖನದಲ್ಲಿ ತಿಳಿಸಿದ್ದಾರೆ.

ಸರ್ವಜ್ಞನ ವಚನಗಳಲ್ಲಿ ಸೇರಿರುವ ಬೇರೆ ಪದ್ಯಗಳಂತೆ ವೇಮನನು ಬರೆದು ಪದ್ಯಗಳಲ್ಲಿ ಅವನವಲ್ಲದೇ ಇರುವವುಗಳನ್ನು ನೋಡಬಹುದು. "ವೇಮನನ ಧಾಟಿಯಲ್ಲಿ ಬರೆದವರು ಅನೇಕರಿದ್ದಾರೆ. "ಬಾಲಚಕ್ರವೇಮ ಭವ್ಯನಾಮ "ಎಂದು ಅಂಕಿತವಿರುವ ಒಂದು ಶತಕವೇ ದೊರೆಯುತ್ತದೆ."[3]

ವೇಮನನ ಪದ್ಯಗಳ ಸಂಖ್ಯೆಯನ್ನು ಕುರಿತು ಹೇಳುವುದು ಕಷ್ಟ. 500 ಪದ್ಯಗಳು ಇವನವು ಎಂದು ಅಚ್ಚಾಗಿವೆ. ಸಿ.ಪಿ. ಬ್ರೌನ್ ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂಪಾದಿಸಿರುವ 2000 ಪದ್ಯಗಳು ನಿಜವಾದವು ಎಂದು ಭಾವಿಸಿ, 1829 ರಲ್ಲಿ ಪ್ರಕಟಿಸಿದರು. ಇವುಗಳಲ್ಲಿ ಹೆಚ್ಚು ಆಟವೇಲದಿ ಛಂದಸ್ಸಿನಲ್ಲಿ, ಕಂದ ತೇಟಗೀತೆ, ಉತ್ಪಲ ಮಾಲೆ ಮುಂತಾದ ವೃತ್ತಗಳು ಬರುತ್ತವೆ. "ವಿಶ್ವದಾಭಿರಾಮ ವಿನುರವೇಮ" ಎಂಬ ಪಲ್ಲವಿ ಬರುತ್ತದೆ. ಬೇರೆ ಪದ್ಯಗಳಲ್ಲಿ ಈ ಪಲ್ಲವಿ ಬರುವ ಅವಕಾಶವಿರುವುದರಿಂದ. "ವಿಶ್ವದಾಭಿರಾಮ ವಿನುರವೇಮ" ಎಂಬ ಪಲ್ಲವಿ ಇರುವ ಆಟವೇಲದಿ ಪದ್ಯಗಳ ವೇಮನ ಬರೆದ ಮೂಲ ಪದ್ಯಗಳೆಂದು ಭಾವಿಸಬಹುದು ಎಂದಿದ್ದಾರೆ.

ಈ ಮೂವರ ಹೆಸರುಗಳಲ್ಲಿ ತುಂಬಾ ದ್ವಂದ್ವವಿರುವುದನ್ನು ಗಮನಿಸಬಹುದು. ಸರ್ವಜ್ಞ ಎಂಬುದು ಯಾವ ನಿರ್ದಿಷ್ಟ ದೇವತೆಯ ಹೆಸರೂ ಅಲ್ಲ, ವ್ಯಕ್ತಿಯ ಹೆಸರು ಅಲ್ಲ ಇದೊಂದು ಬಿರುದಿನಂತೆ ಮಾತ್ರ ಕಂಡುಬರುತ್ತದೆ. ಆದ್ದರಿಂದ 'ಸರ್ವಜ್ಞನೆಂಬುವನು ಗರ್ವದಿಂದಾದವನೆ' ಎಂಬ ಪದ್ಯದಲ್ಲಿ ಈ ಹೆಸರು ಬಿರುದಿರಬಹುದು. ಆದರೆ ತಿರುವಳ್ಳುವರ್ ವಿಷಯವೂ ಇದೇ ರೀತಿ 'ತಿರು' ಗೌರವಾರ್ಥ ಪದ ಶ್ರೀ ಯತದ್ಭವ ಕನ್ನಡದ ಸಿರಿ. 'ವಳ್ಳುವ' ಎಂಬುದು ಪರಂಪರೆಯಲ್ಲಿ ಒಂದು ಪಂಗಡ ಕೊನೆಯ 'ಆರ್' ಬಹುವಚನಪ್ರತ್ಯಯ. ಆನೆಯ ಮೇಲೆ ನಗಾರಿಬಾರಿಸುತ್ತಾ ರಾಜ್ಯ ಶಾಸನಗಳನ್ನು ಘೋಷಿಸುವುದು ವಳ್ಳುವರ್ ಕುಲವೃತ್ತಿ. ಈ ರೀತಿ ಜಾತಿವಾಚಕ ಪದವನ್ನು ಯಾರೂ ಹೆಸರಾಗಿ ಬಳಸಿರಲು ಸಾಧ್ಯವಿಲ್ಲ. ಇನ್ನು ವೇಮನ ಕವಿಯ ಹೆಸರನ್ನು ನೋಡಿದರೆ 'ವೇಮನ' ಎಂಬ ಪದಕ್ಕೆ ಸಂಸ್ಕೃತದಲ್ಲಿ 'ನೇಯ್ಗೆಕಾರ' ಎಂಬರ್ಥ. ಆದರೆ ಈ ಹೆಸರಿಡುವುದು ಹೆಚ್ಚಾಗಿ ರೆಡ್ಡಿ ಜನರಿಗೆ ಎಂಬುದು ಕಂಡುಬರುತ್ತದೆ. ಬಹುಶಃ ರೆಡ್ಡಿ ರಾಜರ ವಂಶದಲ್ಲಿ ಜನಿಸಿದ್ದರಿಂದ ಇವನಿಗೆ 'ವೇಮನ' ಎಂಬ ಹೆಸರು ಬಂದಿರಲೂಬಹುದಾದ ವಾದವನ್ನು ಮುಂದಿಡಬಹುದು. ವೇಮು+ಅನ್ನು (ಬೇವು) ವೇಮನ್ನ

ಆಗಿರಲೂಬಹುದು ಎಂದು ವಿದ್ವಾಂಸರ ಅಭಿಪ್ರಾಯಗಳಿವೆ. ಹೆಸರುಗಳನ್ನು ಅಂಕಿತವಾಗಿ ಬಳಸಬಹುದು. ಇನ್ನಾವುದನ್ನು ಅಂಕಿತವಾಗಿ ಬಳಸಬಾರದು ಎಂಬ ಯಾವುದೇ ನಿರ್ದಿಷ್ಟವಾದ ನಿರ್ಬಂಧವಿಲ್ಲದೆ ಇರುವುದರಿಂದ ಸರ್ವಜ್ಞ ಎಂಬುದು ಒಂದು ಬಿರುದಾಗಿರಲೂ ಬಹುದು ಮತ್ತು ಜನರು ಪ್ರೀತಿಯಿಂದ ಕರೆದದ್ದೂ ಆಗಿರಬಹುದು. ಅಥವಾ ಸಮಾಜ ವಿಡಂಬನೆ ಮಾಡುವ ಸರ್ವಜ್ಞನನ್ನು ಯಾರಾದರೂ ನೀನೇನೂ ಸರ್ವಜ್ಞನನ್ನೋ? ಎಂದು ಪ್ರಶ್ನಿಸಿರುವುದರಿಂದಲೇ ಅವನು ಸಿಟ್ಟಿನಿಂದ ಹೌದು ಎನ್ನುವ ರೀತಿಯಲ್ಲಿ ಇದೇ ಹೆಸರನ್ನು ತನ್ನ ಅಂಕಿತವಾಗಿ ಬಳಸಿರಲೂಬಹುದು.

## "ವೇಮನ ಮತ್ತು ಸರ್ವಜ್ಞನಲ್ಲಿ ಸಾಮ್ಯತೆಗಳು"

ಮೊದಲಿಗೆ ಈ ಇಬ್ಬರು ಕವಿಗಳು ಪದ್ಯಗಳನ್ನು ರಚಿಸಲು ಬಳಸಿದ ಛಂದಸ್ಸಿನ ವಿಷಯವನ್ನು ತಿಳಿಯೋಣ. ಸರ್ವಜ್ಞನಾದರೆ ತ್ರಿಪದಿಯಲ್ಲಿ ಪದ್ಯಗಳನ್ನು ರಚಿಸಿದ್ದಾನೆ. ಸರ್ವಜ್ಞ ಮೂರ್ತಿಯನ್ನು ನೂರಕ್ಕೆ ನೂರು ಪಾಲು ಹೋಲುವವನು ಯೋಗಿ ವೇಮನ. ಕನ್ನಡ ಭಾಷೆಯಲ್ಲಿ ಸರ್ವಜ್ಞನ ವಚನಗಳಿದಂತೆ, ವೇಮನಯೋಗಿಯ ಪದ್ಯಗಳು ಅತ್ಯಂತ ಜನಪ್ರಿಯವಾಗಿವೆ. ವೇಮನ ತೆಲುಗರ ಪ್ರಜಾಕವಿ ತೆಲುಗು ಸಾಹಿತ್ಯದಲ್ಲಿ ವೇಮನ ಕವಿಗೆ ಒಂದು ವಿಶೇಷ ಸ್ಥಾನವಿದೆ. ಅವನ ಪದ್ಯಗಳನ್ನು ಬಾಯಿಪಾಠವಾಗಿಟ್ಟು ಕೊಂಡು ಸಮಯ ಬಂದಾಗ ಹೇಳಿಕೊಂಡು ಆನಂದ ಪಡುತ್ತಾರೆ. 'ವಿಶ್ವದಾಭಿರಾಮ ವಿಸುರವೇಮ' ಕೇಳದಿರುವವರೇ ಇಲ್ಲ. ವೇಮನನಾದರೆ 'ಆಟವೆಲದಿ'ಯ ಛಂದಸ್ಸಿನಲ್ಲಿ ಬರೆದಿದ್ದಾನೆ. ಇದರಲ್ಲಿ ನಾಲ್ಕು ಪಾದಗಳು, ಪ್ರತಿ ಪದ್ಯದಲ್ಲಿ ಇರುತ್ತವೆ. ಪ್ರತಿ ಪಾದದಲ್ಲಿಯೂ ಐದು ಗಣಗಳಿರುವುದನ್ನು ಕಾಣಬಹುದು. ಪ್ರತಿಯೊಂದು ಪಾದದಲ್ಲಿಯೂ ಮೊದಲ ಮೂರು ಸೂರ್ಯ ಗಣಗಳು ಕಂಡುಬರುತ್ತವೆ. ಕೊನೆಗೆ ಎರಡು ಇಂದ್ರ ಗಣಗಳು ಕಂಡುಬರುತ್ತವೆ.

ಪನಸ । ತೊಲನ । ಕನ್ನ । ಪಂಚದಾ। ರಲಕನ್ನ

ಜುಂಡಿ । ತೇನ । ಕನ್ನ । ಜುನ್ನ । ಕನ್ನ ।

ಇದು ಎಲ್ಲಾ 'ಆಟವೇಲದಿ' ಪದ್ಯಗಳಿಗೂ ಸ್ಥಿರವಾದ ಲಕ್ಷಣ. (ಹಲಸಿನ ತೊಳೆಗಿಂತಲೂ, ಸಕ್ಕರೆಗಿಂತಲೂ, ಹೆಜ್ಜೇನಿಗಿಂತಲೂ, ಗಿಣ್ಣಿಗಿಂತಲೂ, ಕಬ್ಬಿನ ಹಾಲಿಗಿಂತಲೂ, ಪ್ರೇಯಸಿಯ ಮಾತು ಸಿಹಿಯಾದದ್ದು.)

ಈ ಇಬ್ಬರ ವಚನಗಳನ್ನು ಮುಖ್ಯವಾಗಿ ಎರಡು ನೆಲೆಗಳಲ್ಲಿ ನೋಡಬಹುದು. ಒಂದು ಧಾರ್ಮಿಕ ಮತ್ತೊಂದು ಲೌಕಿಕ ದೇವರು, ಗುರು, ಯೋಗಿಗಳು ಮುಂತಾದವುಗಳನ್ನು ಹೇಳುತ್ತಾ ಸಂಸಾರ, ವೇಶ್ಯೆ

ಜೀವನ, ದುಷ್ಟರು, ಉತ್ತಮರು ಮುಂತಾದವರ ಬಗ್ಗೆಯೂ ಕವಿಗಳು ಮಾತನಾಡುತ್ತಾರೆ. ಸಮಾಜದಲ್ಲಿ ಕಾಣುವ ದುರ್ವರ್ತನೆ, ಡಾಂಭಿಕ, ಅನೀತಿ ಮುಂತಾದವುಗಳನ್ನು ಇಬ್ಬರೂ ಖಂಡಿಸುತ್ತಾರೆ. ಚಿತ್ತ ಶುದ್ಧವಿಲ್ಲದ ಪೂಜೆ ಕುರಿತು ಇಬ್ಬರೂ ಮಾತನಾಡುತ್ತಾರೆ.

ಚಿತ್ತವಿಲ್ಲದೆ ಗುಡಿಯ ಸುತ್ತಿದರೆ ಫಲವೇನು

ಎತ್ತು ಗಾಣವನು ಹೊತ್ತು ತಾನಿತ್ಯದಿ

ಸುತ್ತಿ ಬಂದಂತೆ ಸರ್ವಜ್ಞ

ಎಂದು ಸರ್ವಜ್ಞ ಹೇಳಿದರೆ,

ಆತ್ಮಶುದ್ಧಿಲೇನಿ ಆಚಾರ ಮದಿಯೇಲ  
ಭಾಂಡ ಶುದ್ಧಲೇನಿ ಪಾಕ ಮೇಲ  
ಚಿತ್ತಶುದ್ಧಿಲೇನಿ ಶಿವಪೂಜ ಲೇಲರಾ  
ವಿಶ್ವದಾಭಿರಾಮ ವಿನುರವೇಮ

ಎಂದೂ ವೇಮನನೂ ಹೇಳುತ್ತಾನೆ.

ಇದರರ್ಥ ಆತ್ಮಶುದ್ಧವಿಲ್ಲದ ಆಚಾರವೇಕೆ, ಭಾಂಡಶುದ್ಧವಿಲ್ಲದ ಪಾಕವೇಕೆ, ಚಿತ್ತಶುದ್ಧವಿಲ್ಲದ ಪೂಜೆಗಳೇಕೆ ಎಂದಿದ್ದಾನೆ. ಈ ಇಬ್ಬರು ಕವಿಗಳು ಚಿತ್ತ ಶುದ್ಧಿಗೆ ಪ್ರಾಧಾನ್ಯತೆಯನ್ನು ನೀಡಿರುವುದು ಈ ಪದ್ಯಗಳಲ್ಲಿ ಕಂಡುಬರುತ್ತದೆ.

ಸರ್ವಜ್ಞ – ವೇಮನ ಇಬ್ಬರೂ ವೇದ ಪುರಾಣಕ್ಕೆ ಪ್ರಾಮುಖ್ಯತೆ ನೀಡಿದವರಲ್ಲ, ಬದಲಾಗಿ ಅನುಭವಕ್ಕೆ ಪ್ರಾಮುಖ್ಯವನ್ನು ನೀಡಿದವರು. ಜಾತಿ, ಮತ , ವರ್ಗ ರಹಿತ ಸಮಾಜದ ನಿರ್ಮಾಣವನ್ನು ಜಯಿಸಿದವರು. ಇವರು ವಿಗ್ರಹಾರಾಧನೆಯನ್ನು ತೀವ್ರತರಹದಲ್ಲಿ ಖಂಡಿಸುತ್ತಾರೆ.

ಕಲ್ಲು ಕಲ್ಲನೆ ಒಟ್ಟಿ ಕಲ್ಲಿನಲಿ ಮನೆಕಟ್ಟಿ  
ಕಲ್ಲ ಮೇಲ್ಕಲ್ಲ ಕೊಳುವ ಮಾನವರೆಲ್ಲ  
ಕಲ್ಲಿನಂತಹರು ಸರ್ವಜ್ಞ

ಇದೆ ಅಭಿಪ್ರಾಯದಲ್ಲಿ ವೇಮನನೂ ಹೇಳುತ್ತಾನೆ.

"ರಾಳ್ಲು ದೆಚ್ಚಿ ನರಲು ರಮ್ಯವತಾ ಗುಡಿಗಟ್ಟಿ  
ರಾತಿ ಪ್ರತಿಮ ಚೇಸಿ ಖ್ಯಾತಿಗಾನು  
ದೇವುಡನುಚ್ಚು ಮೊಕ್ಕ ದೀವಿಂಚಿ ಪಲ್ಕುನಾ ?"[7]

ಈ ಇಬ್ಬರು ಅನುಭವ ವೇದಾಂತಿಗಳು ಯೋಗವನ್ನು ಕುರಿತು ಹೇಳುತ್ತಾರೆ. (ಸಂಸಾರಯೋಗ) ವನ್ನು ಕುರಿತು ಗೃಹಸ್ಥಾಶ್ರಮವನ್ನು ಒಪ್ಪಿಕೊಳ್ಳುವಂತೆ ಹೇಳುತ್ತಾರೆ.

ಬೆಚ್ಚನೆ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಚೆಯರಿವ ಸತಿಯಾಗೆ ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ
"ಸುಗುಣವಂತರಾಲು ಸುದತಿಯ್ಯೆಯುಂಡಿನ
ಬುದ್ದಿ ಮಂತುಲಗುಚು ಪುತ್ರುಲೊಪ್ಪ
ಸ್ವರ್ಗ ಮೇಡಿಕಯ್ಯ ಸಂಸಾರಿಕಿಂಕನು."[೨]

ಸರ್ವಜ್ಞ ಮತ್ತು ವೇಮನ ಇಬ್ಬರೂ ಜಾತೀಯತೆಯನ್ನು ವಿರೋಧಿಸುತ್ತಾರೆ. ಇವರೂ ಎಲ್ಲರಿಗೂ ಸಮಾನತೆ ದೊರೆಯಬೇಕೆಂದು ಹೇಳುವವರಾಗಿದ್ದಾರೆ.

ಜಾತಿ ಹಿನನಾಮನೆಯ ಜ್ಯೋತಿ ತಾ ಹಿನವೇ
ಜಾತಿ ವಿಜಾತಿಯೆನಬೇಡ ದೇವನೊಲಿ
ದಾತನೇ ಜಾತ ಸರ್ವಜ್ಞ.
ಬಾಪ ಡನಗ ನೇಮಿ ಭಕ್ತು ಡನಗ ನೇಮಿ?
ಜೋಗಿ ಯನಗ ನೇಮಿ ಸೂಂಪುಲೋಕ
ಎನ್ನಿ ಪೇರು ಲೈನ ಇನಜುಡು ಪನಿಲೇರ್ಚು

ಅಂದರೆ ಬ್ರಾಹ್ಮಣರೆಂದರೆ ಯಾರು? ಯೋಗ ಎನು? ತಮ್ಮ ಕುಲಗಳಿಗೆ ಎಷ್ಟೇ ಹೆಸರನ್ನಿಟ್ಟುಕೊಂಡರೂ ಕೊನೆಗೆ ಎಲ್ಲವನ್ನು ಯಮ ಕೊಲ್ಲತ್ತಾನೆ ಎಂದಿದ್ದಾನೆ. ಸಾವಿನಲ್ಲಿ ಎಲ್ಲರೂ ಸಮಾನರಾಗಿರುವಾಗ ಬದುಕಿನಲ್ಲಿ ಏಕೆ ಸಮಾನರಾಗಿರಬಾರದು ಎಂದು ಪ್ರಶ್ನಿಸುತ್ತಾನೆ.

ಈ ಇಬ್ಬರೂ ಕವಿಗಳು ಹೇಳುವ ಮಾತುಗಳನ್ನು ಎಲ್ಲಾ ಕಾಲಕ್ಕೂ ಒಪ್ಪುವ ಮಾತುಗಳು ಇವರಿಬ್ಬರೂ ಬಳಸಿದ ಭಾಷೆ ಸರಳವಾದದ್ದು ಅವರು ಹೇಳುವ ವಿಷಯಗಳ ಧಾಟಿ ಕಪಾಳಕ್ಕೆ ಹೊಡೆದಂತಿರುತ್ತದೆ.

---

೧. ಕಲ್ಲುಗಳನ್ನು ತಂದು ಮಾನವರು ರಮ್ಯವಾದ ಗುಡಿಕಟ್ಟಿ, ಅದರಲ್ಲಿ ಕಲ್ಲಿನ ಪ್ರತಿಮೆ ದೇವರೆಂದು ಭಾವಿಸಿ ನಮಸ್ಕರಿಸಲು, ಅದು ನಮ್ಮನ್ನು ಹರಸುತ್ತಿದೆಯೇ?

೨.ಸುಗುಣವತಿಯಾದ ಹೆಂಡತಿಯಿರಲು, ಪುತ್ರರೆಲ್ಲಾ ಬುದ್ಧಿವಂತರಾಗಿ ಒಪ್ಪುತ್ತಿರಲು ಸಂಸಾರಿಗೆ ಇನ್ನು ಸ್ವರ್ಗವೇಕೆ?

ಇವರಿಬ್ಬರಲ್ಲಿ ಕಂಡುಬರುವ ಈ ಸಾಮ್ಯತೆಗೆ ಕಾರಣವೇನು ಎಂದು ತಿಳಿಯ ಹೊರಟರೆ ಅದನ್ನು ಇಂತಿಷ್ಟೆ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಬಹುಶಃ ಅವರ ಕಾಲದಲ್ಲಿದ್ದ ಸಾಮಾಜಿಕ, ಸಾಂಸ್ಕೃತಿಕ ರಾಜಕೀಯ ವಿಚಾರಗಳು ಇವರ ಮೇಲೆ ಪ್ರಭಾವ ಬೀರಬಹುದು. ಈ ಪ್ರಭಾವಗಳು ಅವರ ಅನುಭವದಲ್ಲಿ ಮಿಂದು ಮಾತುಗಳಾಗಿ ಹೊರಬಿದ್ದಿವೆ.

ಏಕೆಂದರೆ ಇವರು ಹೇಳಿರುವುದೆಲ್ಲವೂ ಕೇವಲ ಮೌಖಿಕವಾದದ್ದು ಮಾತ್ರ ಯಾವುದನ್ನು ಅವರು ತಮ್ಮ ಕೈಯಾರೆ ಗ್ರಂಥರೂಪಕ್ಕೆ ತರಲಿಲ್ಲ ಎನ್ನುವುದೇ ಓದುಗರ ಕೊರಗು. ಏನೇ ಆದರೂ ಇವರ ಮಾತುಗಳು ಸಮಾಜವನ್ನು ತಿದ್ದಲು ಅನೀತಿ, ಅಧರ್ಮಗಳನ್ನು ಖಂಡಿಸಲು, ಒಳ್ಳೆಯ ಮಾರ್ಗವನ್ನು ಜನರಿಗೆ ತೋರಿಸಲು ಕರ್ನಾಟಕದಲ್ಲಿ ಸರ್ವಜ್ಞ ಮತ್ತು ಆಂದ್ರದಲ್ಲಿ ಹುಟ್ಟಿ ಬಂದ ವೇಮನರು ' 'ಅನುಭವವೇದಾಂತಿ' ಗಳಾಗಿ ನಮ್ಮ ಅನುಭವಕ್ಕೆ ಬರುತ್ತಾರೆ.

## ಸರ್ವಜ್ಞ ಮತ್ತು ತಿರುವಳ್ಳುವರಲ್ಲಿ ಸಾಮ್ಯತೆಗಳು

ತಮಿಳು ಸಾಹಿತ್ಯದಲ್ಲಿ ಸಂಗಂ ಯುಗ ಬಹಳ ಪ್ರಾಚೀನವಾದುದು. ತಿರುವಳ್ಳುವರ್ ಈ ಕಾಲದಲ್ಲಿ ಸೇರಿದವನೆಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಇವನು ಕ್ರಿ. ಶ. ಮೊದಲನೇ ಶತಮಾನದಲ್ಲಿ ಬರೆದ 'ತಿರುಕ್ಕುರುಳ್' ಪ್ರಪಂಚದ ಪ್ರಸಿದ್ದಿಯನ್ನು ಹೊಂದಿದ ಕಾವ್ಯ. ಇವನು ಮದ್ರಾಸಿನ ಮೈಲಾಪುರದಲ್ಲಿ ವಾಸಿಸುತ್ತಿದ್ದನಂತೆ. ಸರ್ವಜ್ಞನ ಬಗ್ಗೆ ಹಲವಾರು ಐತಿಹ್ಯಗಳು (ದಂತಕಥೆ) ಕಂಡುಬರುತ್ತವೆ. ಅದೇ ರೀತಿ ತಿರುವಳ್ಳುವರ್ ವಿಷಯದಲ್ಲೂ ಇಂಥ ಒಂದು ಕಥೆ ಕಂಡುಬರುತ್ತದೆ.

'ಭಗವಾನ್' ಎನ್ನುವ ಬ್ರಾಹ್ಮಣನಿಗೂ 'ಆದಿ' ಎನ್ನುವ ಹೊಲತಿಗೂ ಪ್ರೇಮ ಬೆಳೆಯಿತು. ಅವರು ಮದುವೆಯಾದರು. ಭಗವಾನ್ ಯಾವಾಗಲೂ ದೇಶಸಂಚಾರದಲ್ಲಿ ತೊಡಗುತ್ತಿದ್ದವನು. ಹುಟ್ಟಿದ ಮಗುವನ್ನು ತಾವು ತಂಗಿದ್ದ ಸ್ಥಳದಲ್ಲೇ ಬಿಟ್ಟು ಹೋಗಬೇಕೆಂದು ಒಪ್ಪಂದ ಮಾಡಿಕೊಂಡ ಮೇಲೆ ಮದುವೆಯಾದರು. ಮೊದಲು ಮಗು ಹುಟ್ಟಿದಾಗ ಎಳೆಯ ಮಗುವನ್ನು ಬಿಟ್ಟು ಹೋಗಲು ತಾಯಿ ವ್ಯಥೆಪಡುತ್ತಾಳೆ. ಆಗ ಆ ಮಗುವು 'ಅಮ್ಮ ಏಕೆ ಸಂಕಟಪಡುತ್ತಿಯಾ? ಕಾಪಾಡುವವನು ಶಿವ! ನೀನು ನೆಮ್ಮದಿಯಾಗಿ ಹೋಗು' ಎಂದಿತಂತೆ. ಆಗ ತಾಯಿ ಸಮಾಧಾನ ಮಾಡಿಕೊಂಡು ಗಂಡನ್ನು ಅನುಸರಿಸುತ್ತಾಳಂತೆ. ಈ ದಂಪತಿಗಳ ಮಗನೇ 'ತಿರುವಳ್ಳುವರ್'

ಸರ್ವಜ್ಞನ ಸರಳ ತ್ರಿಪದಿಗಳಲ್ಲಿ ಎಷ್ಟೋ ಪ್ರಕ್ಷೇಪ ಪದ್ಯಗಳು ಸೇರಿ ಹೋಗಿವೆ. ಆದರೆ ಕುರುಳ್ ಗ್ರಂಥದಲ್ಲಿ ಹೀಗೆ ಸೇರಲು ಅವಕಾಶವಿಲ್ಲ. ಅಲ್ಲೊಂದು ಇಲ್ಲೊಂದು ಪದದಲ್ಲಿ ಮಾತ್ರ ಪಾಠಾಂತರವಿರಬಹುದು. ಆದ್ದರಿಂದ ಯಾವ ರೀತಿಯಿಂದಲೂ ಗ್ರಂಥಾಧಾರವಿರಲು ಸಾಧ್ಯವಿಲ್ಲ. ಈ ಕಥೆಯ ಆರಂಭದಲ್ಲಿ ಒಂದು ಪ್ರಾರ್ಥನೆ ಪದ್ಯವಿದೆ. 'ಆದಿ ಬಗವನ್ಮುದಿರ್ರೇ ಎಲಗೂ' (ಲೋಕಕ್ಕೆ ಆದಿಭಗವಂತನೇ ಮೊದಲು) ಎಂದು ದೇವರ ಸ್ಮರಣೆಯಿದೆ. ಆದಿಭಗವಂತರ ಎಂಬೆರಡು ಶಬ್ದಗಳಿಂದಲೇ ಈ ಕಥೆ ಕಟ್ಟುವುದಕ್ಕೆ ಕಾರಣವಿರಬಹುದು. ಇವನು ನೇಯ್ಗೆ ವೃತ್ತಿಯನ್ನು ಮಾಡುತ್ತಿದ್ದನು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

'ತಿರುವಳ್ಳುವರ್' ವೇದ, ಧರ್ಮಶಾಸ್ತ್ರಗಳು, ಆರ್ಥಶಾಸ್ತ್ರ ನೀತಿಶಾಸ್ತ್ರಗಳನ್ನು ಚೆನ್ನಾಗಿ ಬಲ್ಲವನು ಎಂದು ವಿಮರ್ಶಕರ ಅಭಿಪ್ರಾಯ. ಇವನು ಗೃಹಸ್ಥಾಶ್ರಮವನ್ನು ಅನುಭವಿಸಿದವನು ಎನ್ನುತ್ತಾರೆ. ಗೃಹಸ್ಥಾಶ್ರಮವೇ ಶ್ರೇಷ್ಠವಾದದ್ದು ಎಂದು ಅವರ ಅಭಿಪ್ರಾಯ. ಗೃಹಸ್ಥನೇ ಉಳಿದ ಮೂರು ಆಶ್ರಮದಲ್ಲಿರುವವರಿಗೆ ಆಶ್ರಯರು, 'ಧರ್ಮ ಎನಿಸಿಕೊಳ್ಳುವುದು ಗೃಹಸ್ಥ ಧರ್ಮವೇ' ಎನ್ನುತ್ತಾನೆ. ಇವನ ಹೆಂಡತಿ ವಾಸುಕಿ ಆದರ್ಶ ಗೃಹಿಣಿ. ಇವರದು ಅನ್ಯೋನ್ಯ ದಾಂಪತ್ಯ ಜೀವನ, ಹೆಂಡತಿ ಒಳ್ಳೆಯವಳಾದರೆ ಅವನಿಗೆ ಇನ್ನೇನು? ಎಂದಿದ್ದಾನೆ.

'ತಿರುವಳ್ಳುವರ್' ತನ್ನ ಹೆಂಡತಿ ಸತ್ತ ಮೇಲೆ ಸನ್ಯಾಸಿಯಾದನೆಂದು ಹಲವರ ಅಭಿಪ್ರಾಯ. ಇದೇ ರೀತಿ ಸರ್ವಜ್ಞನ ತ್ರಿಪದಿಯಲ್ಲಿ ಸ್ತ್ರೀವಿಷಯವಾದ ಹಲವು ಪದ್ಯಗಳ ಆಧಾರದಿಂದ ಅವನೂ ಗೃಹಸ್ಥನಾಗಿದ್ದನೆಂದೂ ವೇಶ್ಯಲಂಪಟನಾಗಿದ್ದನೆಂದು ಕಡೆಯಲ್ಲಿ ಸನ್ಯಾಸಿಯಾದನೆಂದು ಊಹಿಸಿರುವವರೂ ಇದ್ದಾರೆ.

ಸರ್ವಜ್ಞನ ಯಾರ ಬಳಿಯಲ್ಲೂ ವಿದ್ಯಾಭ್ಯಾಸ ಮಾಡಿದನೋ ಇಲ್ಲವೋ ತಿಳಿಯದು. ಆದರೆ ನಿಜವಾಗಿಯೂ ಅವನಿಗೆ ಯಾವ ಗುರುವು ಇರಲಿಲ್ಲವೆಂದು ಅವನೇ ಹೇಳಿಕೊಂಡಿದ್ದಾನೆ. 'ಸರ್ವರೊಳಗೊಂದು ನುಡಿಗಲಿತು ವಿದ್ಯದ ಪರ್ವತವೆ ಆದ ಎಂದಿದ್ದಾನೆ.

ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಗಳಂ ಕೇಳುತಂ
ಕೆಲವಂ ಮಾಳ್ಪವರಿಂದ ಕಂಡು ಕೆಲವಂ ಸುಜ್ಞಾನದಿಂ ನೋಡುತಂ
ಕೆಲವಂ ಸಜ್ಜನ ಸಂಗದಿಂದ ಮರೆಯಲ್ ಸರ್ವಜ್ಞನಪ್ಪಂತೆ.

ಈತ ಸರ್ವಜ್ಞನಾಗಿದ್ದಾನೆ ಎಂಬ ಅಭಿಪ್ರಾಯಕ್ಕೆ ಬರಬಹುದು. ಆದರೆ ತಿರುವಳ್ಳುವರ್ ವಿಷಯದಲ್ಲಿ ಯಾವ ಸಂದಿಗ್ಧವೂ ಇಲ್ಲ. ಹೆಸರು, ಗ್ರಂಥ, ಎಲ್ಲಾ ಖಚಿತವಾದವುಗಳೆ. ಹೆಸರು – ತಿರುವಳ್ಳುವರ್, ವಿಷಯ – 'ಧರ್ಮ', 'ಅರ್ಥ', 'ಕಾಮ', ಈ ಮೂರು ಪುರುಷಾರ್ಥಗಳ ವಿವರಣೆ,೧೩೩ ಅಧ್ಯಾಯಗಳು, ೧೩೩೦ ಪದ್ಯಗಳು, ಮೂರು ಪುರುಷಾರ್ಥಗಳಿರುವುದರಿಂದ "ಮುಪ್ಪಾಲ್, ತ್ರಿವರ್ಗ" ಎಂದೂ ಇನ್ನೂ ಹಲವಾರು ಹೆಸರುಗಳಿಂದ ಕರೆಯುತ್ತಾರೆ.

"ಅಗರಮುದಲ ವೆಲತ್ತೆಲ್ಲಾ ಮಾದಿ
ಬಗವನ್ಮುದತ್ರೇಯುಲಗು"[1]

ಇದು ಕುರುಳ್ ಛಂದಸ್ಸಿನ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ಕುರುಳಿನ ಎರಡನೇ ಸಾಲಿಗೆ ಕೊಂಡಿಯೊಂದನ್ನು ಸೇರಿಸಿದಂತೆ, ಮೊದಲಿನಂತೆ ಎರಡನೇ ಸಾಲನ್ನು ಹೇಳಿ ಮೂರು ಸಾಲುಗಳನ್ನು ಮಾಡಿದರೆ ತ್ರಿಪದಿಯಾಗುತ್ತದೆ. ಈ ರೀತಿಯ ತ್ರಿಪದಿಗಳು ತಮಿಳಿನಲ್ಲೂ ಉಂಟು.

ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ
ಕೊಟ್ಟದ್ದು ಕೆಟ್ಟಿತೆನಬೇಡ ಅದು ಮುಂದೆ
ಕಟ್ಟಿದ ಬುತ್ತಿ ಸರ್ವಜ್ಞ

ಈ ಪದ್ಯದಲ್ಲಿ 'ಕೊಟ್ಟಿದ್ದು ಕೆಟ್ಟತೆನಬೇಡ 'ಅಲ್ಲಿಗೆ ನಿಲ್ಲಿಸಿದರೆ ಈ ಪದ್ಯವೂ ಕುರುಳ್‌ನಂತೆ ಆಗುತ್ತದೆ. ಅದು ಮುಂದೆ ಎಂಬುವುದನ್ನು ಕೊಂಡಿಯಾಗಿ ಸೇರಿಸಿ "ಕಟ್ಟಿಟ್ಟ ಬುತ್ತಿ ಸರ್ವಜ್ಞ" ಎಂದು ಸೇರಿಸಿದರೆ ತ್ರಿಪದಿಯಾಗುತ್ತದೆ. ಈ ತ್ರಿಪದಿಯ ಎರಡನೇ ಸಾಲನ್ನು ಮತ್ತೆ ಬರೆದರೆ ತಮಿಳಿನ 'ವೆಣ್ಬಾ' ಪದ್ಯ ಮೂಡಿಬರುತ್ತದೆ.

ಈ ಇಬ್ಬರ ಕೃತಿಗಳಲ್ಲೂ ದೇವರಿಗೆ ಸಂಬಂಧಿಸಿದಂತೆ ಹಲವು ವಚನಗಳಿವೆ.

'ಜಗಕೆಲ್ಲ ಕರ್ತಾರನೊರ್ವನೇ ದೇವ'

'ಲೋಕಕ್ಕೆ ತ್ರಿಣಯನನೆ ದೇವ'

'ಸ್ಮರಹಂಗೆ ಸರಿಯಾರ ಕಾಣೆ'

'ಹರಿ ಬ್ರಹ್ಮರೆಂಬುವರು ಹರನಿಂದಲಾದವರು' ಎಂಬುದನ್ನು ಒತ್ತಿ ಹೇಳುತ್ತಾನೆ.

---

*೧. ಆಕಾರ ಮೊದಲು ಅಕ್ಷರಂಗಳಿಗೆಲ್ಲ, ಆದಿ ಭಗವಂತ ಮೊದಲು ಲೋಕಕೆಲ್ಲ.

'ತನ್ನನ್ನೇ ತಾನು ತಿಳಿದೊಡೆ ಪರಬೊಮ್ಮ ತನ್ನ ತಾನಕ್ಕೂ' (ಆತ್ಮಜ್ಞಾನದಿಂದ ಪರಬ್ರಹ್ಮ ಸ್ವರೂಪವೇ ಆಗಿ ಬಿಡುತ್ತಾನೆ) ಇಂಥ ವಚನವನ್ನು ನೋಡಿದರೇ ವೈದಿಕ ಧರ್ಮದ ಅದ್ವೈತಿಯೆಂದು ತಿಳಿಯಬೇಕಾಗುತ್ತದೆ.

ತಿರುವಳ್ಳುವರ್ ದೇವರೊಬ್ಬನೆ ಎಂಬುದನ್ನು ಒಪ್ಪುತ್ತಾರೆ. ಆದರೆ ಆ ದೇವರನ್ನು ಶಿವನೆಂದಾಗಲೀ ವಿಷ್ಣುವೆಂದಾಗಲೀ ,ಬೇರೆ ಯಾವ ಹೆಸರಿನಿಂದಾಗಲೀ ಕರೆಯುವುದಿಲ್ಲ. ಲೋಕಕ್ಕೆಲ್ಲ ಮೂಲಾಧಾರವಾದ 'ಆದಿ ಭಗವಂತ ' ಎನ್ನುತ್ತಾನೆ.

ಈ ಇಬ್ಬರ ನಡೆನುಡಿಗಳನ್ನು ನೋಡಿದರೆ ಹಿತ ಹೇಳುವ ನೀತಿಕಾರರಾಗಿ ಕಂಡು ಬರುತ್ತಾರೆ. ಇವರ ಭಾವಸಾಮ್ಯವಿರುವುದು ಅತ್ಯಂತ ಸಹಜ. ಇಬ್ಬರ ನಿರೂಪಣಕ್ರಮ ಬೇರೆ ಬೇರೆಯಾಗುವುದರಿಂದ ಕೆಲ ಅಂಶಗಳಲ್ಲಿ ಮಾತ್ರ ಸಾಮ್ಯವನ್ನು ಕಾಣಬಹುದು. ಅಂಥಹ ಕೆಲವೊಂದನ್ನು ಇಲ್ಲಿ ಸಂಗ್ರಹಿಸಿದ್ದೇನೆ.

"ಹಲವನೋದಿದಡೇನು ಚೆಲುವವನಾದೊಡೆಯೇನು
ಕುಲವಂತನಾಗಿ ಫಲವೇನು ಲಿಂಗದ
ಒಲವಿಲ್ಲದನಕ ಸರ್ವಜ್ಞ"*

ಕಱ್‌ದನಾಲಾಯ ಪಯನ್ನೊಲ್ ವಲರೆವನ್
ನಾಱಿಳ್ ತೊಱಾಅರ್ ಎನಿಲ್ (ಕುಱಳ್೨) (ನಲ್+ತಾಳ್)
(ಹಲವು ಕಲ್ತುದರಿಂದ ಬರುವ ಫಲವು ಅದೇನೊ
ಪರಿಶುದ್ಧ ಜ್ಞಾನ ಸ್ವರೂಪನ ಸಲ್ಲಡಿಗೆ ಮಣಿಯರೆನಲು).

ಲಿಂಗದ ಗುಡಿಯಲ್ಲಿ ಲಿಂಗೆಲ್ಲದೆಡೆಯಲ್ಲಿ
ಲಿಂಗದಲಿ ಜಗವು ಅಡಗಿಹುದು ಲಿಂಗವನು
ಹಿಂಗಿ ಪರ ಉಂಟೆ ಸರ್ವಜ್ಞ

ಆದಿ ಭಗವನ್ ಮುದಱೇಉಲಗು(ಕುಱಳ್೧)
(ಆದಿ ಭಗವಂತ ಮೊದಲು ಲೋಕಕ್ಕೆಲ್ಲ).

ಇಲ್ಲಿ ಮಾತು ಮತ್ತು ಭಾವ ಎರಡೂ ಒಂದೇ ಆಗಿದೆ.

ಪಲೆತ್ತಲುಮ್ ನಿಟ್ಟುಲಮ್ ವೇಣ್ಣಾ ಉಲಗಮ್
ಪೆಡೆತ್ತದೊಟೆತ್ತು ವಿಡಲ್
(ಬೋಳಿಸುವುದೂ ನೀಳವಾಗಿಸುವುದೂ ಬೇಡ
ಲೋಕ ಹಳಿದುದ ತಾನು ಉಳಿದು ಬಿಟ್ಟಿರಲಿ)

---

*. 'ಱ' ಎಂಬ ಅಕ್ಷರವನ್ನು 'ಟ್ರ' ಕ್ಕೂ 'ತ್ರ' ಕ್ಕೂ ಮಧ್ಯಸ್ಥವಾಗಿ ಉಚ್ಚರಿಸುತ್ತಾರೆ.

ನಿತ್ಯ ನೇಮಗಳೇಕೆ ಮತ್ತೆ ಪೂಜೆಗಳೇಕೆ
ನೆತ್ತಿ ಬೋಳೇಕೆ ಜಡೆಯೇಕೆ ಅರೆದು ನಡೆ
ಸತ್ಯವುಳ್ಳವರಿಗೆ ಸರ್ವಜ್ಞ

ಯಾದಾನುಮ್ ನಾಡಮಾಲ್ ಊರಾಮಾಲ್ ಎನ್ನೊರುವನ್
ಶಾನ್ದುಗೈಯುಮ್ ಕಲ್ಲಾದವಾರು
(ಯಾವುದಾದರೂ ನಾಡಬಹುದು, ಊರಹುದು ಏನೊಬ್ಬ
ಸಾವವರೆಗೂ ಕಲಿಯದ ಪರಿ)

ಇದ್ದಲಿ ಸಲುವ ಹೋಗಿದ್ದಲ್ಲಿಯೂ ಸಲುವ
ವಿದ್ಯವ ಬಲ್ಲ ಕಡು ಜಾಣಗಿರಿಯಮೇ
ಲಿದ್ದರೂ ಸಲುವ ಸರ್ವಜ್ಞ

"ಊಙೆರು ವಲಿಯಾವುಳ ಮಱನು
ಶೂಱನುಮ್ ತಾನ್ ಮುನ್ದುರುಮ್(ಕುಱಳ್ ೩೮೦)
(ವಿಧಿಯಂತೆ ಬಲು ಬಲ್ಮೆಯುಳ್ಳವು, ಯಾವುವಿವೆ
ಮತ್ತೊಂದ ನೆನದರೊ ತಾ ಬಂದು ನಿಲ್ಲುವುದು ಮುಂದೆ)

ಎಲ್ಲೆಲ್ಲಿ ಕರ್ಮವಿದ್ದಲ್ಲಿಗೆ ತಾ ಹೋಗಿ
ನಿಲ್ಲದವರೊಡನೆ ಬರುತಿರ್ಕು–ವಿಧಿಯಿಂದ
ಬಲ್ಲದರಾರು ಸರ್ವಜ್ಞ"*

ದೆಯ್ವನ್ದೊಳ್ ಅಳ್ ಕೊರುನನ್ ತೊಲುದೆಲುವಾಳ್
ಪೆಯ್ಯನ ಪ್ಪೆಯ್ಯಮ್ ಮಳೈ
(ದೈವಕರೆಗಳು ತನ್ನ ಪತಿಗೆರಗುತೇಳುವಳು
ಅಂಥವಳು ಹುಯ್ಯನಲುಮಳೆ ಹುಯ್ವುದು)
ನಾರಿ ಪತಿಹಿತವ ನುಡಿದರೆ ಸ್ವರ್ಗದ
ದಾರಿ ತೋರುವಳು ಸರ್ವಜ್ಞ

ಇಂತಹ ಹಲವಾರು ನುಡಿಗಳನ್ನು ತಿರುವಳ್ಳುವರ್ ಬರೆದಿರುವ 'ತಿರುಕ್ಕುರುಳ್' ನಿಂದ ಎಷ್ಟು ಬೇಕಾದರೂ ಎತ್ತಿಕೊಳ್ಳಬಹುದು. ತಿರುವಳ್ಳುವರ್ ವೇದಗಳ ಸೂಕ್ಷ್ಮಗಳನ್ನು ಚೆನ್ನಾಗಿ ಅರಿತ ಪರಮ ಜ್ಞಾನಿಯಾಗಿಯೂ ಧರ್ಮಶಾಸ್ತ್ರಗಳ ಅರ್ಥಶಾಸ್ತ್ರ, ನೀತಿಶಾಸ್ತ್ರಗಳನ್ನು ಚೆನ್ನಾಗಿ ಕಲಿತಿದ್ದರಿಂದ ಇಂತಹ ಪದ್ಯಗಳನ್ನು ಬರೆಯಲು ಸಾಧ್ಯವಾಗಿದೆ. ಆದರೆ ನಮ್ಮ ಸರ್ವಜ್ಞ ಯವುದನ್ನೂ ಕಲಿತನೆಂದು ಯಾವ ಗ್ರಂಥದಲ್ಲಿಯೂ ಉಲ್ಲೇಖಗಳು ಕಂಡುಬರುವುದಿಲ್ಲ.

---

*. ಎಲ್.ಗುಂಡಪ್ಪನವರು ಬರೆದಿರುವ : 'ಸರ್ವಜ್ಞ ಮತ್ತು ತಿರುವಳ್ಳುವರ್' ಎಂಬ ಲೇಖನದಲ್ಲಿ ಉಲ್ಲೇಖಿಸಿದ ತಿರುವಳ್ಳುವರ್ ಪದ್ಯಗಳನ್ನು ಆಯ್ದುಕೊಂಡು ಇಲ್ಲಿ ಬಳಸಿಕೊಂಡಿದೆ. [ಪುಸ್ತಕ: ಸರ್ವಜ್ಞ. ಮೈಸೂರು ವಿ.ವಿ.]

ಬದಲಾಗಿ ದೇಶವನ್ನೆಲ್ಲಾ ತಿರುಗಿ ಸಮಾಜವನ್ನು ಅದು ಇದ್ದಹಾಗೆ ನೋಡುತ್ತಾ ಅಲ್ಲಿ ನಡೆಯುವ ಅನೀತಿ, ಅಧರ್ಮ, ಡಾಂಭಿಕತೆ, ಶೋಷಣೆ, ಆಡಂಬರ ಮುಂತಾದವುಗಳನ್ನು ತೀಕ್ಷ್ಣವಾಗಿ ವಿಡಂಬಿಸುತ್ತಾನೆ

ಸರ್ವಜ್ಞ, ವೇಮನ ಮತ್ತು ತಿರುವಳ್ಳವರ್ ಈ ಮೂವರೂ ಕಂಡಿದ್ದು ಸಮಾಜವನ್ನು,ಅದರ ಅಂಕುಡೊಂಕನ್ನು. ವೇಮನ – ಸರ್ವಜ್ಞ – ತಿರುವಳ್ಳುವರ್ ಹೇಳಿರುವ ವಿಷಯಗಳು ಹೃದಯಂಗಮವಾಗಿ ಆಕರ್ಷಣೀಯವಾಗಿವೆ. ಹತ್ತಾರು ಶಬ್ದಗಳಿಂದಲೇ ವಿಸ್ತಾರವಾದ ವಿಚಾರವನ್ನು ಜನ ಮನಕಂಟುವಂತೆ ಹೇಳುವುದೇ ಅವರ ವೈಶಿಷ್ಟ್ಯ. ಶೂನ್ಯ ಹೃದಯದಲ್ಲಿ ನವಚೈತನ್ಯವನ್ನುಂಟುಮಾಡಿ ನೈತಿಕ ಮಾರ್ಗದಿಂದ ಮಾನವನನ್ನು ಮತ್ತಷ್ಟು ಮೇಲ್ಮಟ್ಟಕ್ಕೆ ಏರಿಸುವ ಸಹಜಶಕ್ತಿ ಇವರ ಕವಿತ್ವದಲ್ಲಿದೆ. ಸಮಾಜದಲ್ಲಿರುವ ಅನೀತಿ, ಆಲಸ್ಯ ಮೊದಲಾದ ಅನೇಕ ರೋಗಗಳಿಗೆ ಸಂಜೀವಿನೀ ಮಾತ್ರೆಗಳಂತಿವೆ ಪದ್ಯಗಳು. ಅರ್ಥೌಚಿತ್ಯ, ಭಾಷಾಮಿತಿ, ಭಾವಗಾಂಭೀರ್ಯ – ಇವೆಲ್ಲವು "ಆನೆ ಕನ್ನಡಿಯಲ್ಲಿ ತಾನಡಗಿ ಇಪ್ಪಂತೆ" (ಕೊಂಡ ಅದ್ದಮಂದು ಕೊಂಡಮ್ಮೆಯುಂಡಥಾ ಬೆಟ್ಟವು ಕನ್ನಡಿಯಲ್ಲಿ ಚಿಕ್ಕದಾಗಿ ಅಡಗಿರುವ ಹಾಗೆ) ತ್ರಿಪದಿಗಳಲ್ಲಿ ಅಡಗಿರುವ ಈ ಮೂವರ ನೈಪುಣ್ಯವು ಅಸಾಮಾನ್ಯವಾದುದು.

"ಸರ್ವಜ್ಞ, ವೇಮನ ಮತ್ತು ತಿರುವಳ್ಳವರು ಮೂರು ಭಾಷೆಗಳಲ್ಲಿ ನುಡಿದ ಹುಟ್ಟಿದ ಅವಳಿಗಳು ಅವನಿಗೆ ಓದು – ಬರಹ ಗೊತ್ತಿತ್ತೊ ಇಲ್ಲವೋ, ಕರ್ನಾಟಕದ ಮೂಲೆಯೊಂದರಲ್ಲಿ ಕುಳಿತು, ನಡೆದು ನುಡಿದು ಒಬ್ಬ ಮಹಾತ್ಮನು ತನ್ನ ಟಂಕ ಸಾಲೆಯಲ್ಲಿ ಟಂಕಿಸಿ ಪ್ರಚಾರಕ್ಕೆ ತಂದ ನಿಜವಾದ ನಾಣ್ಯ – ಸರ್ವಜ್ಞ ವಚನಗಳು".[5]

******

## ಅಡಿಟಿಪ್ಪಣಿಗಳು

(1) ಜಿ.ಎಸ್.ಶಿವರುದ್ರಪ್ಪ :– 'ಸರ್ವಜ್ಞ ಒಂದು ಸಮೀಕ್ಷೆ', ಪುಟ–39 (ಬೆಂಗಳೂರು ವಿ. ವಿ)

(2) ಹಾ.ಮಾ.ನಾಯಕ :– 'ಸರ್ವಜ್ಞ' ,ಪುಟ –45 (ಮೈಸೂರು ವಿ.ವಿ)

(3) ಹಾ.ಮಾ. ನಾಯಕ : – 'ಸರ್ವಜ್ಞ', ಪುಟ–47

(4) ಕಾಳೇಗೌಡನಾಗವಾರ :– ಸರ್ವಜ್ಞ ಮತ್ತು ಹರಿಹರ, ಪುಟ–40

(5) ಎಂ. ವಿ. ಸೀತಾರಾಮಯ್ಯ :– ವಿಮರ್ಶೆ: ಸಂಪುಟ–2, ಪುಟ290 ಕವಿಕಾವ್ಯ ಪರಂಪರೆ.

# ಅಧ್ಯಾಯ – ಏಳು

## ಉಪಸಂಹಾರ

ಕನ್ನಡದ ದೇಸಿ ಕಾವ್ಯ ಪದ್ಧತಿಯು ಜನಸಾಮಾನ್ಯರಿಗೂ ಸಾಹಿತ್ಯದ ಸವಿಯನ್ನು ಸುಲಭ ಸಾಧ್ಯಗೊಳಿಸಿದೆ. ಜನಜೀವನಕ್ಕೆ ಹೊಂದಿದ ಜೀವಂತ ಭಾವ ಭಾಷೆಗಳ ರೂಪದಲ್ಲಿ ಈ ಸರಳ ಕಾವ್ಯ ಶೈಲಿಯು ಬಹು ಆಕರ್ಷಕವಾಗಿದೆ. ಈ ಜನಪದ ಸಾಹಿತ್ಯ ಗಂಗೆ ತ್ರಿಪದಿಗಳ ರೂಪದಲ್ಲಿ ಬಗೆಬಗೆಯಾಗಿ ತಿಳಿಯಾಗಿ ಹರಿದು ಜನರ ಜೀವನವನ್ನು ಪಾವನಗೊಳಿಸಿ ಮನವನ್ನು ತಣಿಸಿ , ಇಚಿತಹ ಸಾಹಿತ್ಯವನ್ನು ಹೆಣೆದು ಜನತೆಯ ನಾಲಗೆಯ ಮೇಲೆ ಅದು ಚಿರಕಾಲ ಉಳಿಯುವಂತೆ ಹಾಡಿದ ವರಕವಿಗಳ ಪಂಕ್ತಿಯಲ್ಲಿ ಸರ್ವಜ್ಞನಿಗೆ ಅಗ್ರಪಟ್ಟ ಸಲ್ಲುತ್ತದೆ.

ಸರ್ವಜ್ಞನು ಬಳಸಿರುವ ತ್ರಿಪದಿಯು ಬಹು ಸರಳವಾದ ಕನ್ನಡ ಜಾನಪದ ಛಂದಸ್ಸು. ಕಾರಣ ಅವನ ಹೆಸರಿನಲ್ಲಿ ಅನೇಕರು ಕಾಲಕಾಲಕ್ಕೆ ವಿವಿಧ ವಿಷಯಗಳನ್ನು ಕುರಿತು ತ್ರಿಪದಿಗಳನ್ನು ಜೋಡಿಸುತ್ತಾ ಹೋಗಿರುವರು. ಹೀಗಾಗಿ ಸರ್ವಜ್ಞನ ಅಂಕಿತದಲ್ಲಿ ಸಾವಿರಾರು ತ್ರಿಪದಿಗಳು ಬೆಳೆದು ಬಂದವು.

ಕನ್ನಡದಲ್ಲಿ "ಸರ್ವಜ್ಞ ವಚನಗಳು' ಒಂದು ಶಾಸ್ತ್ರಕಾವ್ಯ, ಅದರಲ್ಲಿ ನೀತಿಶಾಸ್ತ್ರದ ಬೀಜವು ದರ್ಶನಸಾರವನ್ನು ಹೀರಿಕೊಳ್ಳುತ್ತಾ ಚಿಗುರೊಡೆದು ಸುಂದರವಾಗಿ ನಿಂತಿದೆ. ಅದರ ಬೇರುಗಳು ಹಿಂದೆ ಇದ್ದವಾದರೂ ಮೇಲೆದ್ದು ಕಂಗೊಳಿಸಿರುವುದು ಸರ್ವಜ್ಞನ ವಚನ. ಉಜ್ವಲಮೂರ್ತಿಯಾದ ಸರ್ವಜ್ಞ ಕನ್ನಡ ಸಾಹಿತ್ಯ ಷೇತ್ರದಲ್ಲಿ ಕನ್ನಡಿಗರಿಗೆಲ್ಲ ಚಿರಪರಿಚಿತನಾದವನು. ಈ ಸಂಶೋಧನ ಪ್ರಬಂಧದ ಅಧ್ಯಯನದಲ್ಲಿ ಮೊದಲಿಗೆ ಗ್ರಂಥ ಸಂಪಾದನಾಶಾಸ್ತ್ರದ ಮಹತ್ವವನ್ನು ತಿಳಿದು, ನಚಿತರ ಕವಿ ಸರ್ವಜ್ಞನ ಜೀವನ, ದೇಶ, ಕಾಲ – ಮತದ ವಿಚಾರಗಳನ್ನು ಮತ್ತು ಸರ್ವಜ್ಞನ ಭಾಷೆ ಮತ್ತು ಶೈಲಿ, ಜಾನಪದ ಕವಿಯಾಗಿ ಸರ್ವಜ್ಞ ಹೇಗೆ ಕಂಡು ಬಂದಿದ್ದಾನೆ ಎಂಬುದನ್ನು ಸ್ಥೂಲವಾಗಿ, ಸೂಕ್ಷ್ಮವಾಗಿ ನೋಡಲಾಗಿದೆ. ಸರ್ವಜ್ಞ ಕವಿಯ ಅಂಕಿತದ ಬಗ್ಗೆ ಹೇಳುವ ಪ್ರಶ್ನೆಗಳು, ಅನುಮಾನಗಳು ವಿದ್ವಾಂಸರಲ್ಲಿ ಏಳುವ ಬಗೆ, ಅದನ್ನು ಕುರಿತು ಆಲೋಚನೆ ನಡೆಸಲಾಗಿದೆ.

ಪ್ರಮುಖವಾಗಿ ಈ ಅಧ್ಯಯನದ ಮುಖ್ಯ ಉದ್ದೇಶ ಸರ್ವಜ್ಞನ ವಚನಗಳ ಸಂಪಾದನಾ ಕಾರ್ಯಕ್ಕೆ ಅಗಣಿತವಾಗಿ ಸೇವೆ ಸಲ್ಲಿಸಿರುವ ಮಹನೀಯುರ ಕಿರುಪರಿಚಯದೊಂದಿಗೆ, ಸರ್ವಜ್ಞನ ವಚನಗಳ ಸಂಪಾದನಾಕಾರ್ಯದಲ್ಲಿ ಹೇಗೆ 'ಕಿಟೆಲ್ ಪಂಡಿತರು', ತಮ್ಮ ನಿಘಂಟುವಿನಲ್ಲಿ ಸರ್ವಜ್ಞನ ವಚನಗಳನ್ನು ಸಂಗ್ರಹಿಸಿ, ಸಂಪಾದಿಸುವ ಕೆಲಸದಲ್ಲಿ ತೊಡಗಿದರು ಎಂಬುದನ್ನು ತಿಳಿಯುವುದರೊಂದಿಗೆ,

'ತಿರುಳ್ಗನ್ನಡದ ತಿರುಕ' ಎಂಬ ಕಾವ್ಯನಾಮವನ್ನು ಹೊಂದಿರುವ 'ರೆವರೆಂಡ್ ಚೆನ್ನಪ್ಪ ಉತ್ತಂಗಿಯವರು' ಸರ್ವಜ್ಞ ವಚನಗಳನ್ನು ಸಂಪಾದಿಸುವ ಕಾರ್ಯದಲ್ಲಿ ಹೇಗೆ ತೊಡಗಿಸಿಕೊಂಡರು ಮತ್ತು ಅವರ ಸೇವೆ ಎಂಥದ್ದು ಎಂಬುದನ್ನು ಗಮನಿಸಿದೆ. ಉತ್ತಂಗಿ ಚೆನ್ನಪ್ಪನವರ ಹಾದಿಯಲ್ಲೇ ಸರ್ವಜ್ಞ ಪ್ರಪಂಚವನ್ನು ಪ್ರವೇಶಿಸಿ, ಶಾಸ್ತ್ರಿಯವಾಗಿ ಸರ್ವಜ್ಞ ವಚನಗಳನ್ನು ಸಂಪಾದಿಸಿ ಪ್ರಕಟಿಸಿದವರು, ಡಾ. ಎಲ್. ಬಸವರಾಜು ಅವರು. ಒಟ್ಟಾರೆಯಾಗಿ ಈ ಮೂವರೂ ಮಹನೀಯುರು 'ಸರ್ವಜ್ಞ ವಚನಗಳನ್ನು' ಕುರಿತು ಮಾಡಿರುವ ಸೇವೆಯನ್ನು ಗುರುತಿಸುವ ಕೆಲಸವನ್ನು ಮಾಡಲು ಪ್ರಯತ್ನಿಸಿದ್ದೇನೆ.

ನಂತರ, ಸರ್ವಜ್ಞ ಮತ್ತು ವಚನಕಾರರ ಬಗೆಗೆ ಅಧ್ಯಯನ ಮಾಡಿದ್ದು, "ಸರ್ವಜ್ಞ" ತನ್ನ ಕೃತಿ ಮಾರ್ಗದಲ್ಲಿ 'ತಮಿಳಿನ ತಿರುವಳ್ಳುವರ್' ಹಾಗೂ 'ತೆಲುಗಿನ ವೇಮನ' ಅವರೊಡನೆ ಹೋಲಿಕೆಗೆ ನಿಲ್ಲುವಂಥದ್ದು ಹೇಗೆ ಎಂಬುದರ ಬಗೆಗೆ ಅಧ್ಯಯನ ಮಾಡಿದೆ.

ಸರ್ವಜ್ಞನ ವಚನಗಳ ಸಂಪಾದನೆಗೆ ಮುಂದೆ ಕೂಡ ಅನುಸರಿಸಬಹುದಾದ ಹಲವಾರು ಕ್ರಮಗಳು ಕಂಡುಬರುತ್ತವೆ ; ಕಂಪ್ಯೂಟರ್ ಸಹಾಯವಿರಬಹುದು, ಪ್ರಾಚೀನ ಪ್ರತಿಗಳ ಪದ್ಯಗಳು, ಅಂಶಗಣ ತ್ರಿಪದಿಗೆ ಹೊಂದಿಸಿ ಪಾಠ ಪರಿಷ್ಕರಣೆ, ಸಮಾನ ಉಕ್ತಿಗಳ ತ್ರಿಪದಿಗಳ ಗುರುತು, ಇವೆಲ್ಲವೂ ಬಹಳ ಪ್ರಮುಖವಾಗಿ ಕಾಣಿಸುತ್ತದೆ. ಆದ್ದರಿಂದ ಸರ್ವಜ್ಞನ ವಚನಗಳ ಸಂಪಾದನಾಕಾರ್ಯ ಅಗತ್ಯಪೂರ್ಣವಾಗಿ ನಡೆಯಬೇಕಾಗಿದೆ.

ಸಮಾನ ಪಾಠಗಳ ಪರಿಶೀಲನೆ ಪುನರುಕ್ತವಾದ ನುಡಿಗಟ್ಟುಗಳ ಉಲ್ಲೇಖಗಳಿರುವ ತ್ರಿಪದಿಗಳ ಪಾಠ ನಿರ್ಣಯ, ಇವುಗಳ ಬಗ್ಗೆ ಶಾಸ್ತ್ರೀಯವಾದ ಒಂದು ಕ್ರಮವನ್ನು ಸಿದ್ಧಪಡಿಸಿಕೊಳ್ಳಬೇಕಾಗಿದೆ. ಇದು ಶಿಷ್ಟ ಕಾವ್ಯರಚನೆಯ ಸಂಪಾದನೆಗೆ ಭಿನ್ನವಾಗಿರುವ ಕೆಲಸ. ಅದನ್ನು ಮಾಡುವ ಹೊಸ ಪ್ರಯತ್ನಗಳು ನಡೆಯಬೇಕಾಗಿದೆ.

******

# ಆಕರ ಗ್ರಂಥಗಳು

1. ಡಿ .ಎಲ್. ನರಸಿಂಹಾಚಾರ್ ; 'ಕನ್ನಡ ಗ್ರಂಥಸಂಪಾದನೆ'
ಪ್ರಕಟಣೆ: ಕನ್ನಡ ಕವಿ ಕಾವ್ಯಮಾಲೆ–152
ಶಾರದಾಮಂದಿರ ರಾಮಯ್ಯರ್ ರಸ್ತೆ,
ಮೈಸೂರು, 1964.

2. ಆರ್.ಸಿ. ಹಿರೇಮಠ ; 'ಸರ್ವಜ್ಞ ಕವಿ – ಜೀವನ ಹಾಗೂ ಕಾವ್ಯ'
ಪ್ರ: ಆರು ಉಪನ್ಯಾಸಗಳು, ಕರ್ನಾಟಕ. ವಿ.ವಿ.
ಧಾರವಾಡ, 1967.

3. ಎ.ಆರ್. ಕೃಷ್ಣಶಾಸ್ತ್ರೀ. : 'ಸರ್ವಜ್ಞ ಕವಿ'
ಪ್ರ: ನಿರ್ದೇಶಕರು, ಪ್ರಸಾರಾಂಗ
ಮಾನಸ ಗಂಗೋತ್ರಿ, ಮೈಸೂರು, 1948.

4. ಎಂ.ಎಂ. ಕಲಬುರ್ಗಿ : 'ಕನ್ನಡ ಗ್ರಂಥಸಂಪಾದನಶಾಸ್ತ್ರ'
ಪ್ರ: ಸಮಾಜ ಪುಸ್ತಕಾಲಯ, ಧಾರವಾಡ, 1972.

5. ಬಿ.ಎಸ್. ಸಣ್ಣಯ್ಯ : 'ಪ್ರಾಚೀನ ಕನ್ನಡ ಗ್ರಂಥಸಂಪಾದನೆ'
ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2002.

6. ರಂ.ಶ್ರೀ.ಮುಗಳಿ : 'ಕನ್ನಡ ಸಾಹಿತ್ಯ ಚರಿತ್ರೆ'
ಪ್ರ : ಗೀತಾ ಬುಕ್ ಹೌಸ್, ಮೈಸೂರು,1953.

7. ತ.ಸು. ಶಾಮರಾಯ : 'ಕನ್ನಡ ಸಾಹಿತ್ಯ ಚರಿತ್ರೆ'
ಪ್ರ : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ,
ಗೋಕುಲಂ, ಮೈಸೂರು,1993.

8. ಚನ್ನಪ್ಪ ಉತ್ತಂಗಿ (ಸಂ) : 'ಸರ್ವಜ್ಞನ ವಚನಗಳು '
ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1934.

9. ಜಿ. ಎಸ್. ಶಿವರುದ್ರಪ್ಪ (ಸಂ) : 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'
ಪ್ರ: ಪ್ರಸಾರಾಂಗ, ಜ್ಞಾನಭಾರತಿ, ಬೆಂಗಳೂರು ವಿ. 1982.

10. ಎನ್.ಬಸವಾರಾಧ್ಯ : 'ಲೇಖನ ಸಂಚಯ'

ಪ್ರ: ಪ್ರಾಚ್ಯ ಕಾವ್ಯಪ್ರಕಾಶನ ಮಂದಿರ, ಮೈಸೂರು.

11. ರಾಘವ : 'ಕಾವ್ಯಾಲಾಪ'

ಪ್ರ: ರಾಘವ ಪ್ರಕಾಶನ, ಬೆಂಗಳೂರು, 1990.

12. ಎಲ್. ಬಸವರಾಜು (ಸಂ) : 'ಪರಮಾರ್ಥ'

ಪ್ರ: ಗೀತಾಬುಕ್ ಹೌಸ್, ಮೈಸೂರು, 1272.

13. ಎಂ. ವಿ. ಸೀತಾರಾಮಯ್ಯ (ಪ್ರ.ಸಂ): 'ಸರ್ವಜ್ಞನ ವಚನಗಳು'

ವಿ.ವೆಂಕಟರಾವ್, ಡಾ.ಕೆ.ಆರ್. ಗಣೇಶ್. (ಸಂ) ಪ್ರ: ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು, 1982.

14. ಜಿ. ವಿ. ಶಾಸ್ತ್ರಿ (ಸಂಗ್ರಹ) : 'ಸರ್ವಜ್ಞ ಮೂರ್ತಿವಚನಗಳು'

ಪ್ರ: ಪಾರು ಪ್ರಕಾಶನ, ಸ್ಟೇಷನ್ ರಸ್ತೆ,

ಗದಗ, 2001.

15. ಜಿ. ಎಂ. ಉಮಾಪತಿಶಾಸ್ತ್ರಿ : 'ಸರ್ವಜ್ಞ ಕವಿ–ಜೀವನ ಹಾಗೂ ಕಾವ್ಯ'

ಪ್ರ: ಕರ್ನಾಟಕ ವಿ. ವಿ, ಧಾರವಾಡ.

16. ಸಿದ್ದಯ್ಯ ಪುರಾಣಿಕ (ಪ್ರ.ಸಂ) : 'ಮಣಿಹ'

ಎಂ. ವಿ.ಸೀತಾರಾಮಯ್ಯ, ಆರ್.ಶೇಷಶಾಸ್ತ್ರೀ (ಸಂ) : ಪ್ರ: ಬಿ.ಎಂ.ಶ್ರಿ. ಸ್ಮಾರಕ ಪ್ರತಿಷ್ಠಾನ,

ಬೆಂಗಳೂರು, 1982.

17. ಹಾ. ಮಾ. ನಾಯಕ (ಸಂ) : 'ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ'

ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1979.

18. ಸದಾನಂದ ಕನವಳ್ಳಿ (ಸಂ) : 'ಮಹಾಮಾರ್ಗ'

ವೀರಣ್ಣ ರಾಜೂರ ಪ್ರ: ವೀರಶೈವ ಅಧ್ಯಯನ ಅಕಾಡೆಮಿ

ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, 1998.

19. ಹಾ. ಮಾ. ನಾಯಕ : 'ಸರ್ವಜ್ಞ ಕವಿ'

ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. 1976.

20. ಜಿ.ಎಸ್.ಶಿವರುದ್ರಪ್ಪ : 'ಸರ್ವಜ್ಞ'
ಪ್ರ : ಕರ್ನಾಟಕಭಾರತಿ.ಸಂಪುಟ.7, ಸಂಚಿಕೆ, 4

21. ಕಾಳೇಗೌಡ ನಾಗವಾರ : 'ಸರ್ವಜ್ಞ ಮತ್ತು ಹರಿಹರ'
ಪ್ರ: ಮುಂಗಾರು ಪ್ರಕಾಶನ, ಬೆಂಗಳೂರು 2000.

22. ಎಚ್. ಜೆ. ಲಕ್ಕಪ್ಪಗೌಡ : 'ಸಾಹಿತ್ಯ ಬಹುಮುಖಿ ಚಿಂತನೆ'
ಪ್ರ: ಸಿ.ವಿ.ಜಿ. ಪಬ್ಲಿಕೇಷನ್,ಬೆಂಗಳೂರು.

23. ಎಂ. ವಿ. ಸೀತಾರಾಮಯ್ಯ : 'ವಿಮರ್ಶೆ: ಸಂಪುಟ – 3'
ಕವಿ ಕಾವ್ಯ ಪರಂಪರೆ
ಪ್ರ: ವಿ. ಸೀ. ಸಂಪದ, ರಾಜೀವನಗರ, ಬೆಂಗಳೂರು.

24. ಎಚ್. ಎಂ. ಮರುಳಸಿದ್ದಯ್ಯ : 'ಸ್ಮರಣೀಯರು'
ಪ್ರ: ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು.

25. ಎಸ್.ಎಸ್.ಭಗವತಿ (ಸಂ) : 'ಹೊಸಗನ್ನಡಸಾಹಿತ್ಯಾವಲೋಕನ'
ಎಸ್.ಎಸ್.ಮೇಗಲಮನಿ ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ.

26. ಬಿ.ಮಹಾದೇವಪ್ಪ : 'ಅರಿವು – ಆಚಾರ'
ಪ್ರ: ಅರಿವು ಆಚಾರ ಪ್ರಕಟನಾಲಯ.

27. ರಂ.ಶ್ರೀ.ಮುಗಳಿ : 'ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು'
ಪ್ರ: ಉಷಾ ಸಾಹಿತ್ಯ ಮಾಲೆ, ಮೈಸೂರು1985.

28. ಸ.ಸ.ಮಾಳವಾಡ : 'ಸಾಹಿತ್ಯ ಸಂಗಮ'
ಪ್ರ: ಜಯ ಪ್ರಕಾಶನ, ಧಾರವಾಡ– 7, 1970.

29. ಜಿ. ಎಸ್.ಶಿವರುದ್ರಪ್ಪ (ಸಂ) : 'ಸಾಹಿತ್ಯವಾರ್ಷಿಕ, 1971,'
ಪ್ರ: ಪ್ರಚಾರೋಪನ್ಯಾಸವಿಭಾಗ,ಬೆಂ.ವಿ.ವಿ

30. ಎಂ.ಎಂ.ಕಲಬುರ್ಗಿ : 'ಮಾರ್ಗ'– 2. ಪ್ರ: ಕನಾಟಕ ಬುಕ್ ಏಜೆನ್ಸಿ, ಬೆಂಗಳೂರು. 1988.

31. ಗ. ಶಿ. ಹುರಳಿ (ಸಂ) : 'ಪೂಜ್ಯ ಉತ್ತಂಗಿಯವರ ಜೀವನ ಚರಿತ್ರೆ'
ಪ್ರ : ಶ್ರೀ. ಬಸಪ್ಪನವರು, ಕುರುವತ್ತಿ, ಧಾರವಾಡ, 1956.

